# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೧೫ (ಫಾಲ್ಗುಣ ೨೧, ಶಕ ವರ್ಷ ೧೯೩೬)<br>Bengaluru, Thursday, March 12, 2015 (Phalguna 21, Shaka Varsha 1936) | ಸಂಚಿಕೆ ೧೧<br>Issue 11 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**ಕ್ರಸಂ:ಎ1/ಎಫ್‌ಓಸಿ/ವಿವ–2/2008–09 ಕಾರವಾರ, ದಿನಾಂಕ:23–01–2015.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ
ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ಕಾರವಾರ
(ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ)

**ವಿರುದ್ಧ**

**ಅರ್ಜಿದಾರರು:** ಶ್ರೀ. ವೀರಜ್ ವಿಶ್ವನಾಥ ನಾಯ್ಕ
ಸಾ: ಭಗತವಾಡಾ, ಚಾವಡಿ
ಕಾಣಕೋಣ, ಗೋವಾ.
(ಅರ್ಜಿದಾರರ ಪರವಾಗಿ ಶ್ರೀ. ಆರ್.ವಿ. ನಾಯ್ಕ ವಕೀಲರು)

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ಕಾರವಾರ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 22–10–2008 ರಂದು ವರದಿ ಸಲ್ಲಿಸುತ್ತಾ ದಿನಾಂಕ: 20–10–2008 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ಇವರು ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಕ್ಕೆ ಹೋಗುವ ರಸ್ತೆಯಲ್ಲಿ ಕಾರವಾರ ಕಡೆಗೆ ಯಾವುದೋ ವಾಹನದಲ್ಲಿ ಅರಣ್ಯ ಉತ್ಪನ್ನ ಸಾಗಾಟ ಮಾಡುತ್ತಿದ್ದ ಬಗ್ಗೆ ದೂರವಾಣಿಯಲ್ಲಿ ನಮ್ಮ ಸಿಬ್ಬಂದಿಗೆ ತಿಳಿಸಿದಂತೆ ಶಾಖಾ ವನಪಾಲಕ ಶೇಜವಾಡ, ಶಹರ ವನಪಾಲಕ ಕಾರವಾರ ಮತ್ತು ಇತರೇ ಸಿಬ್ಬಂದಿಗಳು ಹಾಗೂ ಶ್ರೀ. ಮಹಾದೇವ ತಾಮ್ಸೆ ಮತ್ತು ಶ್ರೀ. ಆನಂದ ನಾಯರ್ ಇವರನ್ನು ಪಂಚರನ್ನಾಗಿಸಿಕೊಂಡು ಮೇಲೆ ಕಾಣಿಸಿದ ಜಾಗೆಯಲ್ಲಿ ಕಾದು ಕುಳಿತರು. ಬೆಳಿಗ್ಗೆ ಸುಮಾರು 10.00 ಘಂಟೆಯ ಸಮಯಕ್ಕೆ ದೂರದಿಂದ ಒಂದು ಬಿಳಿ ಬಣ್ಣದ ಟಾಟಾ ಸುಮೊ ವಾಹನ ವೇಗವಾಗಿ ಬರುತ್ತಿರುವದನ್ನು ಗಮನಿಸಿ, ಸಮೀಪಕ್ಕೆ ಬರುತ್ತಿದ್ದಂತೆ ನಮ್ಮ ಸಿಬ್ಬಂದಿಗಳು ಕೈಸನ್ನೆ ಮಾಡಿ ನಿಲ್ಲಿಸಲು ಸೂಚನೆ ನೀಡಿದ್ದಾಗ್ಯೂ ಚಾಲಕ ವೇಗದಲ್ಲಿ ಗಾಡಿಯನ್ನು ಮುಂದಕ್ಕೆ ಸಾಗಿಸಿ ಅಟಕಾಯಿಸುವಷ್ಟರಲ್ಲಿ ಗಾಡಿಯಲ್ಲಿದ್ದ ಇಬ್ಬರು ಜನರು ವಾಹನದ ಚಾವಿ ಸಮೇತ ತಪ್ಪಿಸಿಕೊಂಡು ಓಡಿ ಹೋಗಿರುತ್ತಾರೆ. ನಮ್ಮ ಸಿಬ್ಬಂದಿಗಳು ಅವರನ್ನು ಬೆನ್ನಟ್ಟಿದ್ದಾಗಲೂ ತಪ್ಪಿಸಿ ಪರಾರಿಯಾಗಿರುತ್ತಾರೆ. ನಂತರ ನಮ್ಮ ಸಿಬ್ಬಂದಿಗಳು ಸದರ ವಾಹನ ಪರಿಶೀಲಿಸಲಾಗಿ ಅದು ಬಿಳಿಯ ಬಣ್ಣದ ಟಾಟಾ ಸುಮೊ ವಾಹನವಾಗಿದ್ದು ಅದರ ನೋಂದಣಿ ಸಂಖ್ಯೆ:GA-02/J-7063ಆಗಿದ್ದು ಒಳಗಡೆ ಪರಿಶೀಲಿಸಲಾಗಿ, ಸಾಗವಾನಿ ಜಾತಿಯ ಅರೆಹಸಿ ತುಂಡುಗಳು ಇದ್ದು, ಅವುಗಳ ಮೇಲೆ ಇಲಾಖೆಯ ಯಾವುದೇ ಛಪ್ಪಾ ಗುರುತು ಇದ್ದದ್ದು ಕಂಡು ಬರಲಿಲ್ಲ. ಇದರ ಮೇಲಿಂದ ಸದರ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಹೇರಿಕೊಂಡು ಬಂದಿರುವದನ್ನು ಖಾತ್ರಿಪಡಿಕೊಂಡು ನಂತರ ಪಂಚರ ಸಮಕ್ಷಮ ಸದರ ವಾಹನದಲ್ಲಿದ್ದ ಸಾಗವಾನಿ ತುಂಡುಗಳನ್ನು ವಾಹನದಿಂದ ಇಳಿಸಿ, ಅದನ್ನು ಅಳತೆ ಮಾಡಲಾಗಿ ಅವು 15=0.522 ಘ.ಮೀ. ಇದ್ದು ಅದನ್ನು ಅನುಕ್ರಮವಾಗಿ 1 ರಿಂದ 15 ರ ವರೆಗೆ ನಂಬರನ್ನು ಕೊಟ್ಟು ಟೀ ಚಪ್ಪಾ ಹೊಡಿದಿರುತ್ತಾರೆ. ಮುಂದುವರೆದು GA-02/J-7063 ಟಾಟಾ ಸುಮೊವನ್ನು ಪರಿಶೀಲಿಸಿ

ಸದರ ಗಾಡಿಯ ಚಾಸಿಸ್ ನಂಬರ ನೋಡಲಾಗಿ 385003JRQ921297 ಇದ್ದು ಇಂಜಿನಿನ ನಂಬರು 483DH41JRQ757094 ಅಂತಾ ಬರೆದದ್ದು ಇರುತ್ತದೆ. ಸದರ ವಾಹನಕ್ಕೆ ನಂಬರ 16 ಅಂತಾ ಕೊಟ್ಟಿದ್ದು ಇರುತ್ತದೆ. ಮುಂದುವರಿದು ಜಪ್ತಪಡಿಸಿದ ಮ್ಹಾಲಿನ ಸಮೇತ ವಾಹನವನ್ನು ಭದ್ರತೆ ಬಗ್ಗೆ ವಲಯ ಅರಣ್ಯಾಧಿಕಾರಿಗಳ ಕಚೇರಿ, ಕಾರವಾರಕ್ಕೆ ತರುವ ವ್ಯವಸ್ಥೆ ಮಾಡಲು ಅರಣ್ಯ ಪಾಲಕರಿಗೆ ತಿಳಿಸಲಾಯಿತು. ಈ ಬಗ್ಗೆ ಪಂಚನಾಮೆಯನ್ನು ಬೆಳಗ್ಗಿನ 10.15 ರಿಂದ ಸ್ಥಳದಲ್ಲಿ ಶಹರ ವನಪಾಲಕ ಕಾರವಾರ ರವರ ಕಡೆಯಿಂದ ಬರೆಯಲು ಪ್ರಾರಂಭಿಸಿ 11.15 ಗಂಟೆಗೆ ಮುಗಿಸಿದ್ದು ಇರುತ್ತದೆ. ಈ ಬಗ್ಗೆ ಶಾಖಾ ವನಪಾಲಕ ಶೇಜವಾಡ ರವರು ಪ್ರಥಮ ಮಾಹಿತಿ ವರದಿ ಸಂಖ್ಯೆ:2/2008-09, ದಿನಾಂಕ: 20-10-2008 ರಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24,80, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ144 ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 23/30-10-2008 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ಜಾತಿಯ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಕುರಿತು ಈ ಪ್ರಾಧಿಕಾರವು ದಿನಾಂಕ: 18-12-2008 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪಣಜಿಮ್-ಗೋವಾ ಇವರಿಗೆ ಪತ್ರ ಬರೆದು ಟಾಟ ಸುಮೊ ವಾಹನ ಸಂಖ್ಯೆ: GA-02/J-7063 ನೇದರ ಮಾಲೀಕತ್ವದ ವಿಳಾಸವನ್ನು ಒದಗಿಸಲು ತಿಳಿಸಲಾಗಿ, ಈ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಡಗಾಂವ-ಗೋವಾ ಇವರ ವರದಿ ದಿನಾಂಕ: 09-01-2009 ರಂತೆ ಸದರ ವಾಹನದ ಮಾಲೀಕರಾದ ಶ್ರೀ. ವೀರಜ್ ನಾಯ್ಕ, ಸಾ: ಭಗತವಾಡೊ ಚಾವಡಿ, ಕಾಣಕೋಣ, ಗೋವಾ ಇವರಾಗಿದ್ದು ಸದರಿಯವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ವಕಾಲತ್ ಅರ್ಜಿಯನ್ನು ಸಲ್ಲಿಸಿರುತ್ತಾರೆ.

3. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 24-02-2009, 17-10-2014, 14-11-2014 ಮತ್ತು 28-11-2014 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ. ಆದರೆ, ವಾಹನ ಮಾಲೀಕರು ಮತ್ತು ಅವರ ಪರವಾಗಿ ವಕೀಲರು ಮೇಲಿನಂತೆ ವಿಚಾರಣೆ ಕಾಲಕ್ಕೆ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿದ್ದು ಇರುವದಿಲ್ಲ.

4. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿರುವದಿಲ್ಲ. ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯು-1 ರಿಂದ ಪಿಡಬ್ಲ್ಯು-3 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯು-1: ಶ್ರೀ. ತಿಪ್ಪಯ್ಯ ಗೋವಿಂದಪ್ಪ ನಾಯ್ಕ, ನಿವೃತ್ತ ಉಪ ವಲಯ ಅರಣ್ಯಾಧಿಕಾರಿ,

ಪಿಡಬ್ಲ್ಯು-2: ಶ್ರೀ. ಸುರೇಶ ರಾಮಾ ನಾಯ್ಕ, ಉಪ ವಲಯ ಅರಣ್ಯಾಧಿಕಾರಿ, ಹಟ್ಟಿಕೇರಿ ಶಾಖೆ.

ಪಿಡಬ್ಲ್ಯು-3: ಶ್ರೀ. ಮಾಧವ ರಘುವೀರ ತಾಮ್ಸೆ, ಕೋಡಿಬಾಗ, ಕಾರವಾರ.

ನಿಶಾನೆ ಪಿ-1 ರಿಂದ ಪಿ-4 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ-1 : ಪಂಚನಾಮೆ

ನಿಶಾನೆ ಪಿ-2&3 : ವಾಹನದ ಛಾಯಾ ಚಿತ್ರ

ನಿಶಾನೆ ಪಿ-4 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-5 : ಸೀಜರ್ ರಿಪೋರ್ಟ

ನಿಶಾನೆ ಪಿ-6 : ವಿಚಾರಣಾ ವರದಿ

5. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ನಗಗಳು 15=0.522 ಘ.ಮೀ. ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಟಾಟಾ ಸುಮೊ ವಾಹನ ಸಂಖ್ಯೆ: GA-02/J-7063 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯು–1** ನಾನು 2005 ರಿಂದ 2012 ವರೆಗೆ ಶಹರ ವನಪಾಲಕ ಕಾರವಾರ ಅಂತಾ ಕೆಲಸ ಮಾಡಿರುತ್ತೇನೆ. ದಿನಾಂಕ: 20–10–2008 ರಂದು ನಾನು ನಮ್ಮ ವಲಯ ಕಚೇರಿಯಲ್ಲಿದ್ದೆ. ಆಗ ಶೇಜವಾಡ ವನಪಾಲಕರಿಗೆ ಮಾನ್ಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ಇವರು ವಾಹನದಲ್ಲಿ ಮರಗಳ ಕಳ್ಳಸಾಗಾಣಿಕೆಯಾಗುತ್ತಿದ್ದ ಬಗ್ಗೆ ಬಾತ್ಮಿ ಬಂದಿದೆ. ದಾಳಿಗೆ ಹೋಗಲು ತಿಳಿಸಿದಂತೆ ಅವರು ನಮ್ಮ ವಲಯ ಕಚೇರಿಗೆ ಬಂದಿರುತ್ತಾರೆ. ಹಾಗೂ ಈ ಬಗ್ಗೆ ವಿಷಯವನ್ನು ನಮಗೆ ತಿಳಿಸಿರುತ್ತಾರೆ. ನಂತರ ಅವರು ದೂರವಾಣಿ ಮೂಲಕ ಪಂಚರಾದ ಆನಂದ ಎಸ್. ನಾಯರ್ ಹಾಗೂ ಮಹಾದೇವ ತಾಮ್ಸೆ ಇವರನ್ನು ವಲಯ ಕಚೇರಿಗೆ ಕರೆಯಿಸಿರುತ್ತಾರೆ. ಪಂಚರು ನಾನು ಹಾಗೂ ಶೇಜವಾಡ ವನಪಾಲಕರಾದ ಶ್ರೀ. ಸುರೇಶ ಆರ್. ನಾಯ್ಕ ಹಾಗೂ ಇತರೇ ಅರಣ್ಯ ಸಿಬ್ಬಂದಿಗಳು ನಮ್ಮ ಬೈಕ್ ಮೇಲೆ ಬಾತ್ಮಿ ಹೇಳಿದ ಸ್ಥಳವಾದ ಬಾಡ ಗ್ರಾಮದ ಬಾಂಡಿಶಿಟ್ಟಾ ಹತ್ತಿರ ಹೋಗಿರುತ್ತೇವೆ. ಅಲ್ಲಿ ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಗೆ ಹೋಗುವ ರಸ್ತೆಯ ಮಳೆಕೋಣ ಎಂಬಲ್ಲಿ ನಾವು ವಾಹನಕ್ಕಾಗಿ ಕಾಯುತ್ತಾ ನಿಂತಿವೆ ನಾವು ಕುಳಿತ ಸ್ಥಳದಲ್ಲಿ ಬೆಳಗ್ಗಿನ 10 ಗಂಟೆ ಸುಮಾರಿಗೆ ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಗೆ ಹೋಗುವ ಸ್ಥಳದಲ್ಲಿ ಒಂದು ಬಿಳಿ ಬಣ್ಣದ ಟಾಟಾ ಸುಮೊ ವಾಹನ ವೇಗವಾಗಿ ಬಂತು ಅದನ್ನು ನಾವು ಕೈಸನ್ನೆ ಮಾಡಿ ನಿಲ್ಲಲು ಸೂಚನೆ ನೀಡಿದಾಗ ಚಾಲಕನು ವೇಗವಾಗಿ ಗಾಡಿಯನ್ನು ಮುಂದಕ್ಕೆ ಸಾಗಿಸಿ ಸುಮಾರು 75 ಮಾರು ಅಂತರದಲಿ ಗಾಡಿ ನಿಲ್ಲಿಸಿರುತ್ತಾನೆ. ಹಾಗೂ ಗಾಡಿಯಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ. ನಾವು ನಮ್ಮ ವಾಹನದಲ್ಲಿ ಅವರನ್ನು ಬೆನ್ನಟ್ಟಿದಾಗ ಅವರು ಸಿಗಲಿಲ್ಲ. ಪಂಚರ ಸಮಕ್ಷಮ ವಾಹನ ಪರಿಶೀಲಿಸಿಲಾಗಿ ಅದು ಬಿಳಿ ಬಣ್ಣದ ಟಾಟಾ ಸುಮೊ ಆಗಿದ್ದು ಅದರ ನೋಂದಣಿ ಸಂಖ್ಯೆ: ಜಿಎ–02/ಜೆ–7063 ಆಗಿದ್ದು ಪರಿಶೀಲಿಸಲಾಗಿ ಅದರಲ್ಲಿ ಅರೆಹಸಿ ಸಾಗ ತುಂಡುಗಳು ಇದ್ದವು ಅದಕ್ಕೆ ಅಧಿಕೃತ ಇಲಾಖಾ ಛಪ್ಪಾ ವಗೈರೆ ಇರಲಿಲ್ಲ. ಕಾರಣ ಅವುಗಳನ್ನು ಪಂಚರ ಸಮಕ್ಷಮ ಕೆಳಗಿಳಿಸಿ ಅಳತೆ ಮಾಡಿ ನಂಬರನ್ನು ಹಾಕಿರುತ್ತೇವೆ. ಅವು ಒಟ್ಟೂ 15 ನಗಗಳಿದ್ದು ಅಂದಾಜು 0.522 ಘ.ಮೀ. ಇತ್ತು. ಇದಕ್ಕೆ ಇಲಾಖಾ ಟೀ ಛಪ್ಪಾ ಹಾಕಿರುತ್ತೇವೆ. ಆರೋಪಿತರು ವಾಹನದ ಕೀಲಿಯನ್ನು ತೆಗೆದುಕೊಂಡು ಹೋಗಿರುತ್ತಾರೆ. ವಾಹನದ ಚಾಲಕನು ವಾಹನದ ಚಾವಿಯನ್ನು ತೆಗೆದುಕೊಂಡು ಹೋಗಿದ್ದರಿಂದ ಡೈರೆಕ್ಟ್ ವಾಯರ್ ಕನೆಕ್ಷನ್ ಮಾಡಿಕೊಂಡು ವಾಹನ ಹಾಗೂ ಸಾಗ ತುಂಡುಗಳನ್ನು ವಲಯ ಕಚೇರಿಗೆ ತಂದಿರುತ್ತಾರೆ. ಸಾಗ ತುಂಡುಗಳನ್ನು ಅನಧಿಕೃತವಾಗಿ ಮೇಲೆ ಹೇಳಿದ ವಾಹನದಲ್ಲಿ ಸಾಗಿಸುತ್ತಿದ್ದ ಬಗ್ಗೆ ಖಾತ್ರಿಯಾದ್ದರಿಂದ ಪಂಚನಾಮೆ ಬರೆದು ವಾಹನ ಹಾಗೂ ಸಾಗ ತುಂಡುಗಳನ್ನು ಜಪ್ತ ಪಡಿಸಿಕೊಂಡಿರುತ್ತೇವೆ. ಪಂಚನಾಮೆಯನ್ನು ನಾನೇ ಬರೆದಿರುತ್ತೇನೆ. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–1 ಎಂದು ಸಾಕ್ಷಿ ಸಹಿಯನ್ನು ನಿ.ಪಿ–1ಎ ಎಂದು ಗುರುತಿಸಲಾಯಿತು. ವಾಹನದ ಫೋಟೊಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ವಾಹನವು ಈಗ ಕಾರವಾರ ವಲಯ ಕಚೇರಿಯ ಆವರಣದಲ್ಲಿ ಇರುತ್ತದೆ. ಜಪ್ತಪಡಿಸಿಕೊಂಡ ವಾಹನ ಹಾಗೂ ಸಾಗ ತುಂಡುಗಳನ್ನು ಕಾರವಾರ ವಲಯ ಕಚೇರಿಗೆ ತರಲಾಯಿತು. ಈ ಬಗ್ಗೆ ಸುರೇಶ ನಾಯ್ಕ ರವರು ಪ್ರ.ವಾ ವರದಿಯನ್ನು ದಾಖಲಿಸಿರುತ್ತಾರೆ. ವಾಹನವನ್ನು ಅನಧಿಕೃತ ಸಾಗ ತುಂಡುಗಳನ್ನು ಸಾಗಾಟ ಮಾಡಲು ಉಪಯೋಗಿಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೇಳಿಕೊಳ್ಳುತ್ತೇನೆ.

**ಪಾಟೀ ಸವಾಲು:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲ್ಯು–2** ನಾನು 2006 ರಿಂದ 2010 ಜುಲೈ ವರೆಗೆ ನಾನು ಶೇಜವಾಡಾ ಶಾಖೆಯ ವನಪಾಲಕ ಅಂತಾ ಕೆಲಸ ಮಾಡಿರುತ್ತೇನೆ. ದಿನಾಂಕ: 20–10–2008 ರಂದು ನಾನು ಶೇಜವಾಡಾದಲ್ಲಿ ಇದ್ದಾಗ ನನಗೆ ಮಾನ್ಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ಇವರು ವಾಹನದಲ್ಲಿ ಮರಗಳ ಕಳ್ಳಸಾಗಾಣಿಕೆಯಾಗುತ್ತಿದ್ದ ಬಗ್ಗೆ ಬಾತ್ಮಿ ಬಂದಿದೆ. ದಾಳಿಗೆ ಹೋಗಲು ತಿಳಿಸಿದಂತೆ ನಾನು ನಮ್ಮ ವಲಯ ಕಚೇರಿಗೆ ಬಂದಿರುತ್ತೇನೆ. ಹಾಗೂ ನಂತರ ನಾನು ದೂರವಾಣಿ ಮೂಲಕ ಪಂಚರಾದ ಆನಂದ ಎಸ್. ನಾಯರ್ ಹಾಗೂ ಮಹಾದೇವ ರಘುವೀರ ತಾಮ್ಸೆ ಇವರನ್ನು ವಲಯ ಕಚೇರಿಗೆ ಕರೆಯಿಸಿದೆ. ಪಂಚರು ನಾನು ಹಾಗೂ ಕಾರವಾರ ಶಹರ ವನಪಾಲಕರಾದ ಶ್ರೀ. ಟಿ.ಜಿ. ನಾಯ್ಕ ಹಾಗೂ ಅರಣ್ಯ ರಕ್ಷಕ ವಿ.ಎಸ್. ಕಾಮತ ಎಲ್ಲರೂ ಸೇರಿ ನಮ್ಮ ಬೈಕ್ ಮೇಲೆ ಬಾತ್ಮಿ ಹೇಳಿದ ಸ್ಥಳವಾದ ಬಾಡ ಗ್ರಾಮದ ಬಾಂಡಿಶಿಟ್ಟಾ ಹತ್ತಿರ ಹೋಗಿರುತ್ತೇವೆ. ಅಲ್ಲಿ ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಗೆ ಹೋಗುವ ರಸ್ತೆಯ ಮಳೆಕೋಣ ಎಂಬಲ್ಲಿ ನಾವು ವಾಹನಕ್ಕಾಗಿ ಕಾಯುತ್ತಾ ನಿಂತಿವೆ ನಾವು ಕುಳಿತ ಸ್ಥಳದಲ್ಲಿ ಬೆಳಗ್ಗಿನ 10 ಗಂಟೆ ಸುಮಾರಿಗೆ ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಗೆ ಹೋಗುವ ಸ್ಥಳದಲ್ಲಿ ಒಂದು ಬಿಳಿ ಬಣ್ಣದ ಟಾಟಾ ಸುಮೊ ವಾಹನ ವೇಗವಾಗಿ ಬಂತು ಅದನ್ನು ನಾವು ಕೈಸನ್ನೆ ಮಾಡಿ ನಿಲ್ಲಲು ಸೂಚನೆ ನೀಡಿದಾಗ ಚಾಲಕನು ವೇಗವಾಗಿ ಗಾಡಿಯನ್ನು ಮುಂದಕ್ಕೆ ಸಾಗಿಸಿ ಸುಮಾರು 75 ಮಾರು ಅಂತರದಲ್ಲಿ ಗಾಡಿ ನಿಲ್ಲಿಸಿರುತ್ತಾನೆ. ಹಾಗೂ ಗಾಡಿಯಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ. ಓಡಿ ಹೋದವರನ್ನು ನಾನು ನೋಡಿದರೆ ಗುರುತಿಸುತ್ತೇನೆ. ನಾವು ನಮ್ಮ ವಾಹನದಲ್ಲಿ ಅವರನ್ನು ಬೆನ್ನಟ್ಟಿದಾಗ ಅವರು ಸಿಗಲಿಲ್ಲ. ಪಂಚರ ಸಮಕ್ಷಮ ವಾಹನ ಪರಿಶೀಲಿಸಲಾಗಿ ಅದು ಬಿಳಿ ಬಣ್ಣದ ಟಾಟಾ ಸುಮೊ ಆಗಿದ್ದು ಅದರ ನೋಂದಣಿ ಸಂಖ್ಯೆ: ಜಿಎ–02/ಜೆ–7063 ಆಗಿದ್ದು ಪರಿಶೀಲಿಸಲಾಗಿ ಅದರಲ್ಲಿ ಅರೆಹಸಿ ಸಾಗ ತುಂಡುಗಳು ಇದ್ದವು ಅದಕ್ಕೆ ಅಧಿಕೃತ ಇಲಾಖಾ ಛಪ್ಪಾ ವಗೈರೆ ಇರಲಿಲ್ಲ. ಕಾರಣ ಅವುಗಳನ್ನು ಪಂಚರ

ಸಮಕ್ಷಮ ಕೆಳಗಿಳಿಸಿ ಅಳತೆ ಮಾಡಿ ನಂಬರನ್ನು ಹಾಕಿರುತ್ತೇವೆ. ಅವು ಒಟ್ಟೂ 15 ನಗಗಳಿದ್ದು ಅಂದಾಜು 0.522 ಘ.ಮೀ. ಇತ್ತು. ಇದಕ್ಕೆ ಇಲಾಖಾ ಟೀ ಛಪ್ಪಾ ಹಾಕಿರುತ್ತೇವೆ. ಆರೋಪಿತರು ವಾಹನದ ಕೀಲಿಯನ್ನು ತೆಗೆದುಕೊಂಡು ಹೋಗಿರುತ್ತಾರೆ. ವಾಹನದ ಚಾಲಕನು ವಾಹನದ ಚಾವಿಯನ್ನು ತೆಗೆದುಕೊಂಡು ಹೋಗಿದ್ದರಿಂದ ಡೈರೆಕ್ಟ್ ವಾಯರ್ ಕನೆಕ್ಷನ್ ಮಾಡಿಕೊಂಡು ವಾಹನ ಹಾಗೂ ಸಾಗ ತುಂಡುಗಳನ್ನು ವಲಯ ಕಚೇರಿಗೆ ತಂದಿರುತ್ತಾರೆ. ಸಾಗ ತುಂಡುಗಳನ್ನು ಅನಧಿಕೃತವಾಗಿ ಮೇಲೆ ಹೇಳಿದ ವಾಹನದಲ್ಲಿ ಸಾಗಿಸುತ್ತಿದ್ದ ಬಗ್ಗೆ ಖಾತ್ರಿಯಾದ್ದರಿಂದ ಪಂಚನಾಮೆ ಬರೆದು ವಾಹನ ಹಾಗೂ ಸಾಗ ತುಂಡುಗಳನ್ನು ಜಪ್ತ ಪಡಿಸಿಕೊಂಡಿರುತ್ತೇವೆ. ಪಂಚನಾಮೆಯನ್ನು ಪಿಡಬ್ಲ್ಯು–1 ಇವರು ಬರೆದಿರುತ್ತಾರೆ. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ವಾಹನದ ಫೋಟೊಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ವಾಹನವು ಈಗ ಕಾರವಾರ ವಲಯ ಕಚೇರಿಯ ಆವರಣದಲ್ಲಿ ಇರುತ್ತದೆ. ಜಪ್ತಪಡಿಸಿಕೊಂಡ ವಾಹನ ಹಾಗೂ ಸಾಗ ತುಂಡುಗಳನ್ನು ಕಾರವಾರ ವಲಯ ಕಚೇರಿಗೆ ತರಲಾಯಿತು. ಈ ಬಗ್ಗೆ ನಾನು ಪ್ರ.ವಾ ವರದಿಯನ್ನು ದಾಖಲಿಸಿರುತ್ತೇನೆ. ಪ್ರ.ವಾ ವರದಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–4 ಎಂದು ಸಾಕ್ಷಿ ಸಹಿಯನ್ನು ನಿ.ಪಿ–4ಎ ಎಂದು ಗುರುತಿಸಲಾಯಿತು. ಜಪ್ತ ವರದಿಯನ್ನು ನಾನೇ ಸಲ್ಲಿಸಿದ್ದು ಅದನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–5 ಎಂದು ಸಾಕ್ಷಿ ಸಹಿಯನ್ನು ನಿ.ಪಿ–5ಎ ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ಮುಂದಿನ ತನಿಖೆಯನ್ನು ನಾನು ಮಾಡಿ ವಲಯ ಅರಣ್ಯಾಧಿಕಾರಿಯವರಿಗೆ ತನಿಖಾ ವರದಿ ಸಲ್ಲಿಸಿರುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ತನಿಖಾ ವರದಿಯನ್ನು ನಿಪಿ–6 ಸಾಕ್ಷಿ ಸಹಿಯನ್ನು ನಿ.ಪಿ–6ಎ ಎಂದು ಗುರುತಿಸಲಾಯಿತು. ವಾಹನವನ್ನು ಅನಧಿಕೃತ ಸಾಗ ತುಂಡುಗಳನ್ನು ಸಾಗಾಟ ಮಾಡಲು ಉಪಯೋಗಿಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಾರ್ಥಿಸಿಕೊಳ್ಳುತ್ತೇನೆ.

**ಪಾಟೀ ಸವಾಲು:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲ್ಯು–3:** ದಿನಾಂಕ:20–10–2008 ರಂದು ನಾನು ಕೋಡಿಬಾಗದಲ್ಲಿ ಬೆಳಿಗ್ಗೆ 9.30 ಘಂಟೆ ಸುಮಾರಿಗೆ ಇದ್ದೆ ಆಗ ಪ್ರ.ಸ. 2 ರವರು ನನಗೆ ದೂರವಾಣಿ ಮಾಡಿ ಕಾರವಾರ ವಲಯ ಕಚೇರಿಗೆ ಬರಲು ತಿಳಿಸಿದರು. ಅದರಂತೆ ನಾನು ಕಾರವಾರ ವಲಯ ಕಚೇರಿಗೆ ಬಂದಾಗ ಅಲ್ಲಿ ಪ್ರ.ಸ–1 ಮತ್ತು 2 ಮತ್ತು ಕಾಮತ ಎನ್ನುವ ಅರಣ್ಯ ರಕ್ಷಕರಿದ್ದರು. ಹಾಗೂ ಇನ್ನೊಬ್ಬ ಮನುಷ್ಯ ಆನಂದು ನಾಯರ್ ಬಂದಿರುತ್ತಾನೆ. ಆತನಿಗೂ ಸಹ ಪ್ರ.ಸ–2 ರವರು ಅಲ್ಲಿಗೆ ಕರೆಯಿಸಿದ್ದರು. ಪ್ರ.ಸ–2 ರವರು ನನಗೆ ಹಾಗೂ ಆನಂದು ನಾಯರ ಇತನಿಗೆ ಅರಣ್ಯ ಮರಗಳು ಕಳ್ಳಸಾಗಾಣಿಕೆಯಾಗುತ್ತಿದ್ದ ಬಗ್ಗೆ ಮಾಹಿತಿ ಇರುತ್ತಿದ್ದು ಈ ಬಗ್ಗೆ ನೀವು ಪಂಚರಾಗಿ ಬರಬೇಕೆಂದು ಕೇಳಿಕೊಂಡರು. ಅದರಂತೆ ನಾವು ಅದಕ್ಕೆ ಒಪ್ಪಿ ಅವರ ಬೈಕುಗಳಲ್ಲಿ ಬಾಂಡಿಶಿಟ್ಟಾ ರಸ್ತೆಗೆ ಹೋದೆವು. ಅಲ್ಲಿ ಮಳಕೋಣ ಎಂಬಲ್ಲಿ ಕಾಯುತ್ತಾ ಕುಳಿತೆವು. ಸುಮಾರು ಅರ್ಧ ಗಂಟೆಯ ನಂತರ ಒಂದು ಬಿಳಿ ಬಣ್ಣದ ಟಾಟಾ ಸುಮೊ ಬಂದಿದ್ದು ನಾವೆಲ್ಲ ಕೈ ಸನ್ನೆ ಮಾಡಿ ನಿಲ್ಲಿಸಲು ಹೇಳಿದೆವು ಆದರೆ ಚಾಲಕರು ವಾಹನವನ್ನು ನಿಲ್ಲಿಸದೇ ಸುಮಾರು 75 ಮೀಟರ್ ಅಂತರದಲ್ಲಿ ವಾಹನವನ್ನು ನಿಲ್ಲಿಸಿ ಅದರಲ್ಲಿದ್ದ ಇಬ್ಬರು ವ್ಯಕ್ತಿಗಳು ಓಡಿ ಹೋಗಿರುತ್ತಾರೆ. ನೋಡಿದ್ದಲ್ಲಿ ಗುರುತಿಸುತ್ತೇನೆ. ಅರಣ್ಯ ಸಿಬ್ಬಂದಿಗಳು ಅವರನ್ನು ಹಿಡಿಯಲು ಪ್ರಯತ್ನಿಸಿದ್ದು ಅವರು ಸಿಕ್ಕಿರುವದಿಲ್ಲ. ನಂತರ ನಮ್ಮ ಸಮಕ್ಷಮ ವಾಹನವನ್ನು ಇಲಾಖೆಯವರು ಪರಿಶೀಲಿಸಿದ್ದು ವಾಹನದ ಸಂಖ್ಯೆ: ಜಿಎ–02/ಜೆ–7063 ಆಗಿರುತ್ತದೆ. ವಾಹನದಲ್ಲಿ ಹಸಿ ಸಾಗ ತುಂಡುಗಳು ಇದ್ದವು ಅದಕ್ಕೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಅದನ್ನು ವಾಹನದಿಂದ ಕೆಳಗಿಳಿಸಿ ಎಣಿಸಲಾಗಿ, ಒಟ್ಟೂ 15 ಸಾಗ ತುಂಡುಗಳು ಇದ್ದು ಅಳತೆ ಮಾಡಲಾಗಿ 0.522 ಘ.ಮೀ.ಅಳತೆಯಿದ್ದು ಅದಕ್ಕೆ ನಂಬರನ್ನು ಕೊಟ್ಟು ಇಲಾಖಾ ಟೀ ಛಪ್ಪಾ ಹಾಕಲಾಯಿತು. ಈ ಬಗ್ಗೆ ಪ್ರ.ಸ.–1 ರವರು ಪಂಚನಾಮೆ ಬರೆದರು ಹಾಗೂ ಸಾಗ ತುಂಡುಗಳನ್ನು ಮತ್ತು ವಾಹನವನ್ನು ಜಪ್ತಪಡಿಸಿಕೊಂಡಿರುತ್ತಾರೆ. ವಾಹನದ ಚಾಲಕನು ವಾಹನದ ಚಾವಿಯನ್ನು ತೆಗೆದುಕೊಂಡು ಹೋಗಿದ್ದರಿಂದ ಡೈರೆಕ್ಟ್ ವಾಯರ್ ಕನೆಕ್ಷನ್ ಮಾಡಿಕೊಂಡು ವಾಹನ ಹಾಗೂ ಸಾಗ ತುಂಡುಗಳನ್ನು ವಲಯ ಕಚೇರಿಗೆ ತಂದಿರುತ್ತಾರೆ. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ,ಪಿ–1ಸಿ ಎಂದು ಗುರುತಿಸಲಾಯಿತು. ನನ್ನ ಸಂಗಡ ಪ್ರ.ಸ–1 & 2 ಹಾಗೂ ಆನಂದ ಇವರು ನಿ.ಪಿ–1 ಕ್ಕೆ ಸಹಿ ಮಾಡಿರುತ್ತಾರೆ. ಪಂಚನಾಮೆಯ ವಿವರಗಳು ಸರಿ ಇರುತ್ತವೆ. ವಾಹನದ ಫೋಟೊಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು 3 ಎಂದು ಈಗಾಗಲೇ ಗುರುತಿಸಿದೆ.

**ಪಾಟೀ ಸವಾಲು:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ದಿನಾಂಕ: 20–10–2008 ರಂದು ಗುನ್ನೆ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ದೂರವಾಣಿಯ ನಿರ್ದೇಶನದ ಮೇರೆಗೆ ಶಾಖಾ ವನಪಾಲಕ ಶೇಜವಾಡ, ಶಹರ ವನಪಾಲಕ ಕಾರವಾರ ಮತ್ತು ಇತರೇ ಸಿಬ್ಬಂದಿಗಳು ಹಾಗೂ ಶ್ರೀ. ಮಹಾದೇವ ತಾಮ್ಸೆ ಮತ್ತು ಶ್ರೀ. ಆನಂದ ನಾಯರ್ ಇವರನ್ನು ಪಂಚರನ್ನಾಗಿಸಿಕೊಂಡು ಬಾಂಡಿಶಿಟ್ಟಾದಿಂದ ದೇವತಿಶಿಟ್ಟಾಕ್ಕೆ ಹೋಗುವ ರಸ್ತೆಯಲ್ಲಿ ಮಳಕೋಣ ಎಂಬಲ್ಲಿ ಕಾದು ಕುಳಿತರು. ಆ ಸಮಯಕ್ಕೆ ಬೆಳಿಗ್ಗೆ ಸುಮಾರು 10.00 ಘಂಟೆಗೆ ಒಂದು ಬಿಳಿ ಬಣ್ಣದ ಟಾಟಾ ಸುಮೊ ವಾಹನ ವೇಗವಾಗಿ ಬರುತ್ತಿರುವದನ್ನು ಗಮನಿಸಿ, ನಿಲ್ಲಿಸಲು ಕೈಸನ್ನೆ ಮಾಡಿದರೂ ವೇಗವಾಗಿ ಹೋಗಿದ್ದು ಅದನ್ನು ಸಿಬ್ಬಂದಿಗಳು ಬೆನ್ನಟ್ಟಿದ್ದಾಗ ವಾಹನವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ ಎರಡು ಜನರು ಪರಾರಿಯಾಗಿರುತ್ತಾರೆ. ನಂತರ ಸಿಬ್ಬಂದಿಗಳು ಸದರ ವಾಹನ ಪರಿಶೀಲಿಸಲಾಗಿ ಅದು ಬಿಳಿಯ ಬಣ್ಣದ ಟಾಟಾ ಸುಮೊ ವಾಹನವಾಗಿದ್ದು ಅದರ ನೋಂದಣಿ ಸಂಖ್ಯೆ: GA-02/J-7063ಆಗಿದ್ದು ಒಳಗಡೆ ಪರಿಶೀಲಿಸಲಾಗಿ, ಸಾಗವಾನಿ ಜಾತಿಯ ಅರೆಹಸಿ ತುಂಡುಗಳು ಇದ್ದು, ಅವುಗಳು 15=0.522 ಘ.ಮೀ.ಆಗಿರುತ್ತದೆ. ಅವುಗಳ ಮೇಲೆ ಇಲಾಖೆಯ ಯಾವುದೇ ಛಪ್ಪಾ ಗುರುತು ಇರುವುದಿಲ್ಲ.

ಇದರಿಂದ ಸದರ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಹೇರಿಕೊಂಡು ಬಂದಿರುವದು ಖಾತ್ರಿಯಾಗಿರುವದರಿಂದ ಪಂಚರ ಸಮಕ್ಷಮ ಪಂಚನಾಮೆ ಪ್ರಥಮ ಮಾಹಿತಿ ವರದಿ ದಾಖಲಿಸಿಕೊಳ್ಳಲಾಗಿದೆ. ಸದರ ವಾಹನವು ಗುನ್ಹೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ– 1 ರಿಂದ ನಿ.ಪಿ–6) ದಾಖಲಾಗಿದೆ. ಪಿಡಬ್ಲು–1 ರಿಂದ ಪಿಡಬ್ಲು–3 ಇವರು ಅರ್ಜಿದಾರ ಪರ ವಕೀಲರು ಪಾಟೀ ಸವಾಲು ಕೈಕೊಳ್ಳಲು ನ್ಯಾಯಾಲಯದಲ್ಲಿ ಹಾಜರಾಗಿರುವದಿಲ್ಲ. ಮತ್ತು ಅರ್ಜಿದಾರರು ಸಹ ಹಲವಾರು ಬಾರಿ ನೋಟೀಸು ನೀಡದ್ದಾಗ್ಯೂ ನ್ಯಾಯಲಯದಲ್ಲಿ ಹಾಜರಾಗಿರುವದಿಲ್ಲ. ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ರಿಂದ ಪಿಡಬ್ಲು–3** ಇವರು ನೀಡಿದ ಹೇಳಿಕೆಯು ಕೂಡ ಸದರ ಟಾಟಾ ಸುಮೊ ವಾಹನ ಮತ್ತು ಸಾಗ ನಗಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ಹೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಟಾಟಸುಮೊ ವಾಹನಸಂಖ್ಯೆ: GA-02/J-7063ಇದು ದಿನಾಂಕ: 20–10–208 ರಂದು ಪ್ರಥಮ ಮಾಹಿತಿ ಸಂಖ್ಯೆ: 02/2008–09, ದಿನಾಂಕ: 20–10–2008 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸಾಗ ನಗಗಳು 15=0.522 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**: ಆದೇಶ :**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ಹೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಟಾಟಾಸುಮೊ ವಾಹನಸಂಖ್ಯೆ: GA-02/J-7063 ಮತ್ತು ಅದರಲ್ಲಿದ್ದ ಸಾಗ ನಗಗಳು 15=0.522 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | |
|---|---|---|
| 1) ನೋಂದಣಿ ಸಂಖ್ಯೆ | : | GA-02/J-7063 |
| 2) ಇಂಜಿನ್ ನಂಬರ | : | 483DH41JRQ757094 |
| 3) ಚಾಸಿ ನಂಬರ | : | 385003JRQ921297 |
| 4) ವಾಹನದ ಮಾದರಿ | : | ಟಾಟಾ ಸುಮೊ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 23–01–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**Certified Copy**

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

PR - 288

SC - 05

## ತಹಶೀಲ್ದಾರರವರ ಕಾರ್ಯಾಲಯ, ಶಿರಸಿ

**ನಂ.ಅಭಿಲೇಖಾಲಯ/ವಿವ/1827/2014–15 ದಿನಾಂಕ: 17–12–2014**

### ಮಾಹಿತಿ ಪಡೆಯಲು ಹಕ್ಕು 2005 ರ ಅಧಿನಿಯಮದ ಅಧ್ಯಾಯ II ರ ಪರಿಚ್ಛೇದ (ಸೆಕ್ಷನ್) 4 (1)(ಬಿ) (i) ರನ್ವಯ

**1) ಇಲಾಖೆಯ ಪರಿಚಯ ಹಾಗೂ ಕಾರ್ಯಚಟುವಟಿಕೆಗಳನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.**

ಸರ್ಕಾರಿ ನೌಕರರು ಸರ್ಕಾರದ ಬಹುದೊಡ್ಡ ಆಸ್ತಿಯಾಗಿದ್ದು, ಸರ್ಕಾರದ ಆಡಳಿತದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಸರ್ಕಾರಿ ನೌಕರರು ಖಾಯಂ ಮತ್ತು ನಿಷ್ಪಕ್ಷಪಾತವಾದ ಸಾಧನ. ಸರ್ಕಾರಿ ನೌಕರರ ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ಸಂರಕ್ಷಿಸುವುದು ತಮ್ಮ ಕರ್ತವ್ಯವೆಂದು ಸರ್ಕಾರಗಳು ಯಾವಾಗಲೂ ಭಾವಿಸಿದೆ. ಸರ್ಕಾರದ ಮಹತ್ತರ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಹೋಗುವದು ಸರ್ಕಾರದ ನೀತಿ.

**ಸಂಘಟನೆಯ ವಿವರಗಳು**




ಪ್ರಜಾ ಪ್ರಭುತ್ವವೆಂದರೆ ಜನರಿಂದ ಜನರಿಗಾಗಿ ನಡೆಸುವ ಆಡಳಿತ ಎಂಬ ಮಾತು ಕಾರ್ಯರೂಪಕ್ಕೆ ಬರಬೇಕಾಗಿರುತ್ತದೆ. ತಹಶೀಲ್ದಾರ ಶಿರಸಿ ರವರು ಕಾರ್ಯಾಲಯದ ಆಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು ತಾಲೂಕಿನ ಕಾನೂನು ಸೂವ್ಯವಸ್ಥೆಯ ಬಗ್ಗೆ ಸಂಪೂರ್ಣ ಅಧಿಕಾರವುಳ್ಳವರಾಗಿದ್ದಾರೆ ಹಾಗೂ ಜವಾಬ್ದಾರರಾಗಿದ್ದಾರೆ. ಅವರನ್ನು ಸರಕಾರದ ಅಧಿಸೂಚನೆಯಂತೆ ಸಾರ್ವಜನಿಕ ಪ್ರಾಧಿಕಾರವೆಂದು ಘೋಷಿಸಲಾಗಿದೆ. ಕಚೇರಿಯ ಒಳ ಆಡಳಿತ ನೋಡಲು ಕಚೇರಿ ಶಿರಸ್ತೇದಾರರು ಅವರನ್ನು ಸಹ ಮೇಲ್ಕಾಣಿಸಿದ ಸರಕಾರದ ಅಧಿಸೂಚನೆಯ ಪ್ರಕಾರ ಸಕ್ಷಮ ಪ್ರಾಧಿಕಾರರೆಂದು ಘೋಷಿಸಲಾಗಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಒಟ್ಟೂ 11 ತಾಲೂಕುಗಳಿದ್ದು, ಅವುಗಳ ಪೈಕಿ ಶಿರಸಿ ತಾಲೂಕುವು ಒಂದಾಗಿದೆ. ಶಿರಸಿ ತಾಲೂಕಿಗೆ ಸಂಬಂಧಿಸಿರುವಂತೆ ಒಟ್ಟು ನಾಲ್ಕು ಹೋಬಳಿಗಳು ಇರುತ್ತದೆ. ಅವು ಶಿರಸಿ, ಬನವಾಸಿ, ಹುಲೇಕಲ್, ಸಂಪಖಂಡ ಆಗಿರುತ್ತದೆ.

ಈ ಕಾರ್ಯಾಲಯದಲ್ಲಿ ತಹಶೀಲ್ದಾರ ಗ್ರೇಡ್–1 ಹುದ್ದೆ–1, ತಹಶೀಲ್ದಾರ, ಗ್ರೇಡ್–2 ಹುದ್ದೆ–1, ಶಿರಸ್ತೇದಾರ–4, ಪ್ರ.ದ.ಸ – 4 ಸಿಬ್ಬಂದಿಗಳು, ದ್ವಿ.ದ.ಸ–10, ಬೆರಳಚ್ಚುಗಾರರು–3, ಒಬ್ಬ ವಾಹನ ಚಾಲಕರು, 5 'ಡಿ' ದರ್ಜೆ ನೌಕರರು ಕಾರ್ಯನಿರ್ವಹಿಸುತ್ತಿದ್ದು, ಸಂಕಲನದ ಹಂಚಿಕೆಯನ್ನು ಲಭ್ಯವಿರುವ 14 ಜನ ' ಸಿ ' ವರ್ಗದ ಸಿಬ್ಬಂದಿಯವರಿಗೆ ಸಂಕಲನದ ಒತ್ತಡವನ್ನು ಪರಿಗಣಿಸಿ ಹಂಚಲಾಗಿದೆ.

ಸರಕಾರದ ಹಾಗೂ ಸಿಬ್ಬಂದಿ ನೇಮಕಾತಿ ಅಧಿಕಾರಿಗಳಾದ ಮಾನ್ಯ ಜಿಲ್ಲಾಧಿಕಾರಿಗಳು ಕಾರವಾರರವರ ಸುತ್ತೋಲೆ, ಮಾರ್ಗದರ್ಶನ ಹಾಗೂ ನಿರ್ದೇಶನಗಳನ್ನು ಪಾಲಿಸಿ ಕಾರ್ಯನಿರ್ವಹಿಸಲಾಗುತ್ತದೆ.

**(11) ತಹಶೀಲ್ದಾರರ ಮತ್ತು ಸಿಬ್ಬಂದಿಗಳ ಅಧಿಕಾರ ಮತ್ತು ಜವಾಬ್ದಾರಿಗಳು.**

**ಕೆಳಕಂಡ ಸಾಮಾನ್ಯ ಕಾರ್ಯಗಳನ್ನು ಪ್ರಮುಖವಾಗಿ ನಿರ್ವಹಿಸುತ್ತದೆ.**

1) ಕಾರ್ಯಕಾರಿ ದಂಡಾಧಿಕಾರತ್ವ ಮೂಲಕ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವದು.
2) ಸರಕಾರಕ್ಕೆ ಸಂಬಂಧಿಸಿದಂತೆ ಎಲ್ಲಾ ರೀತಿಯ ಸಾರ್ವಜನಿಕ ದೂರು ನಿರ್ವಹಣೆ.
3) ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಸಾರ್ವಜನಿಕ ವಿತರಣೆ ವ್ಯವಸ್ಥೆಯ ನಿರ್ವಹಣೆ.
4) ಎಲ್ಲಾ ರೀತಿಯ ಚುನಾವಣೆಯನ್ನು ನಡೆಸುವದು.
5) ಎಲ್ಲಾ ರೀತಿಯ ಗಣತಿ ಕಾರ್ಯವನ್ನು ನಡೆಸುವದು .
6) ಎಲ್ಲಾ ಔಪಚಾರಿಕ ಸಮಾರಂಭಗಳಲ್ಲಿ ರಾಜ್ಯದ ಪರವಾಗಿ ಶಿಷ್ಟಾಚಾರ ಕಾರ್ಯನಿರ್ವಹಿಸುವದು.
7) ಪ್ರಕೃತಿ ವಿಕೋಪ ನಿರ್ವಹಣೆ, ನೈಸರ್ಗಿಕ ಮತ್ತು ಮಾನವ ನಿರ್ಮಿತ ವಿಶೇಷಗಳಿಂದ ಬಾಧಿತರಾದವರಿಗೆ ಪರಿಹಾರ ಪುನರವಸತಿ ಮತ್ತು ಪುನರ ನಿರ್ಮಾಣ ಕಾರ್ಯನಿರ್ವಹಣೆ.

8) ಯೋಜನೆ ಮತ್ತು ಸಂತ್ರಸ್ಥ ಮತ್ತು ಭಾದಿತ ಕುಟುಂಬಗಳಿಗೆ ಪುನರವಸತಿ ಮತ್ತು ನಿರ್ಮಾಣ ನಿರ್ವಹಣೆ.

9) ಕೇಂದ್ರ ಮತ್ತು ರಾಜ್ಯ ಸರಕಾರಗಳ ವಿವಿಧ ಯೋಜನೆಗಳ ಕಾರ್ಯಕ್ರಮಗಳ ಸಮನ್ವಯ ಹಾಗೂ ಪರೀವೀಕ್ಷಣಾ ಕಾರ್ಯನಿರ್ವಹಣೆ. ಮಾಶಾಸನಗಳಾದ ವೃದ್ದಾಪ್ಯ, ಅಂಗವಿಕಲ, ವಿಧವಾ ವೇತನ, ಸಂಧ್ಯಾ ಸುರಕ್ಷಾ ಯೋಜನೆ, ರಾ.ಸಾ.ಕು.ನೆ ಯೋಜನೆ, ಆದರ್ಶ ವಿವಾಹ, ದೇವದಾಸಿ ಪದ್ಧತಿ ಮತ್ತಿತರ ಸಾಮಾಜಿಕ ಸುರಕ್ಷತೆಯನ್ನು ನಿರ್ವಹಿಸುವದು.

10) ಜನನ ಮರಣ ನೊಂದಣಿ

11) ಆದಾಯ, ಜಾತಿ, ಧರ್ಮಾ ನಿವಾಸ ರಾಷ್ಟ್ರೀಯತೆ, ಅಲ್ಪಸಂಖ್ಯಾತರ ಸ್ಥಾನಮಾನಗಳ ಬಗ್ಗೆ ಪ್ರಮಣ ಪತ್ರ ನೀಡಿರುವ ಬಗ್ಗೆ ಪರಿಶೀಲನೆ.

12) ಎಲ್ಲಾ ನ್ಯಾಯಾಲಯಗಳ ಸರಕಾರಿ ವ್ಯಾಜ್ಯ ನಿರ್ವಹಣೆ

13) ಮುಜರಾಯಿ ಇಲಾಖೆಗೆ ಸಂಬಂಧಪಟ್ಟ ದೇವಾಲಯಗಳ ನಿರ್ವಹಣೆ

14) ಅಧೀನ ಕಚೇರಿಗಳ ತಪಾಸಣೆ.

| | |
|---|---|
| ತಹಶೀಲ್ದಾರ, ಶಿರಸಿ | ಶಿರಸಿ ತಾಲೂಕು ದಂಡಾಧಿಕಾರಿಗಳಾಗಿದ್ದು, ಕಛೇರಿಯ ಆಡಳಿತ ಮೇಲ್ವಿಚಾರಣೆ, ಹಣಕಾಸಿನ ವಿಷಯಕ್ಕೆ ಸಂಬಂಧ ಪಟ್ಟ ಕರ್ತವ್ಯ ಮತ್ತು ಜವಾಬ್ದಾರಿಗಳು, ವಿವಿಧ ವಿಷಯಗಳ ಬಗ್ಗೆ ಸಭೆಗಳನ್ನು ನಡೆಸುವದು ಹಾಗೂ ಸಭೆಗಳಲ್ಲಿ ಭಾಗವಹಿಸುವುದು, ತಮ್ಮ ಅಧೀನದಲ್ಲಿ ಬರುವ ನಾಡಕಛೇರಿಗಳ ದಪ್ತರ ತಪಾಸಣೆ ಕಾರ್ಯನಿರ್ವಹಿಸುವದು, ಇನ್ನಿತರೆ ಕರ್ತವ್ಯಗಳನ್ನು ನಿಭಾಯಿಸುವದು. |
| ಪ್ರ.ದ.ಸ | ಕಚೇರಿ ಅಧೀನದಲ್ಲಿ ಬರುವ ವಿಷಯಗಳಲ್ಲಿ ಅವರಿಗೆ ವಹಿಸಿದ ಸಂಕಲನದ ಎಲ್ಲಾ ಕೆಲಸಗಳನ್ನು ನಿರ್ವಹಿಸುವದು. |
| ದ್ವಿ.ದ.ಸ | ಕಚೇರಿ ಅಧೀನದಲ್ಲಿ ಬರುವ ವಿಷಯಗಳಲ್ಲಿ ಅವರಿಗೆ ವಹಿಸಿದ ಸಂಕಲನದ ಎಲ್ಲಾ ಕೆಲಸಗಳನ್ನು ನಿರ್ವಹಿಸುವದು. |
| ಬೆರಳಚ್ಚುಗಾರರು | ಕಚೇರಿಯ ಎಲ್ಲಾ ವಿಷಯಗಳ ಬಗ್ಗೆ ಕಾಗದ ಪತ್ರಗಳನ್ನು ಬೆರಳಚ್ಚು ಹಾಗೂ ಗಣಕ ಯಂತ್ರದಲ್ಲಿ ಅಳವಡಿಸುವ ಕರ್ತವ್ಯವನ್ನು ನಿರ್ವಹಿಸುವದು. |
| ವಾಹನ ಚಾಲಕ | ತಹಶೀಲ್ದಾರ, ಶಿರಸಿ ರವರೊಂದಿಗೆ ವಾಹನ ಚಲಾಯಿಸಿ, ವಾಹನ ನಿರ್ವಹಣೆ ಬಗ್ಗೆ ಕಾಳಜಿ ವಹಿಸುವುದು. |
| ' ಡಿ ' ದರ್ಜೆ ನೌಕರರು (ಜವಾನರು) | ಕಾರ್ಯಾಲಯದ ಶುಚಿತ್ವ ಹಾಗೂ ಕಚೇರಿಯ ಸುಗಮ ಆಡಳಿತ ನಿರ್ವಹಣೆಗಾಗಿ ತಹಶೀಲ್ದಾರ ಹಾಗೂ ಸಿಬ್ಬಂದಿ ವರ್ಗದವರಿಗೆ ಸಹಾಯ ಮಾಡುವದು, ಪಿಠೋಪಕರಣಗಳ ಜವಾಬ್ದಾರಿ, ಸ್ಟೆನ್ಸಿಲ್, ಜೆರಾಕ್ಸ, ಪ್ಯಾಕ್ಸ, ವಾಯರಲೆಸ್ ಯಂತ್ರಗಳ ನಿರ್ವಹಣೆ, ಕಚೇರಿಯ ಖಜಾನೆ–ಬ್ಯಾಂಕ್ ಕೆಲಸ ನಿರ್ವಹಿಸುವದು. |

**(III) ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು, ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು:**

ಉಪತಹಶೀಲ್ದಾರ ಕಛೇರಿಯ ಯಾವುದೇ ಪತ್ರ ವ್ಯವಹಾರವು ಸ್ವೀಕೃತಿಯ ರಜಿಸ್ಟರ್ ಮೂಲಕ ಕಚೇರಿಯ ವಿಷಯ ನಿರ್ವಾಹಕರಿಗೆ ತಲುಪಿದ ಮೇಲೆ ವಿಷಯ ನಿರ್ವಾಹಕರು ಕಡತದಲ್ಲಿ ತೆಗೆದುಕೊಂಡು ಸುಸಂಗತ ಸಕಲ ಪರಿಸ್ಥಿತಿಗಳೊಂದಿಗೆ ಪ್ರಸ್ತಾವನೆಯನ್ನು ಕಚೇರಿಯ ಮೇಲ್ವಿಚಾರಕರ ಮುಖಾಂತರ ತಹಶೀಲ್ದಾರ, ಶಿರಸಿ ರವರಿಗೆ ಮಂಡಿಸಲಾಗುತ್ತದೆ. ಉಪತಹಶೀಲ್ದಾರ, ಬನವಾಸಿ ಹುಲೇಕಲ್, ಸಂಪಖಂಡ ರವರು ತಮಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಪ್ರಸ್ತಾವನೆಯ ಬಗ್ಗೆ ಕೈಕೊಳ್ಳಬೇಕಾದ ಅನುಕ್ರಮದ ಕುರಿತು ನಿರ್ಣಯಿಸುವರು. ಅಥವಾ ಅಗತ್ಯವಿದ್ದಲ್ಲಿ ಆದೇಶಕ್ಕಾಗಿ ಕಡತವನ್ನು ತಹಶೀಲ್ದಾರ, ಶಿರಸಿ, ರವರಿಗೆ ಮಂಡಿಸಲಾಗುವದು ಹಾಗೂ ಅವರ ನಿರ್ದೇಶನದಂತೆ ಕ್ರಮ ಕೈಗೊಳ್ಳಲಾಗುವದು.

**(IV) ಕರ್ತವ್ಯ ನಿರ್ವಹಣೆಯಲ್ಲಿ ಅಳವಡಿಸಿಕೊಂಡಿರುವ ಸೂತ್ರಗಳು/ವಿಧಿವಿಧಾನಗಳು:**

| | |
|---|---|
| ತಹಶೀಲ್ದಾರ ಹಾಗೂ ತಾಲೂಕ ದಂಡಾಧಿಕಾರಿಗಳು, ಶಿರಸಿ | ಸರ್ಕಾರದಿಂದ ಪ್ರದತ್ತವಾದ ಅಧೀಕಾರದಂತೆ ಹಾಗೂ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಕರ್ತವ್ಯಗಳನ್ನು ಆದ್ಯತೆ ಮೇರೆಗೆ ನಿರ್ವಹಿಸುವದು. ಹಾಗೂ ಈ ಕೆಳಗಿನ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ನಿರ್ವಹಿಸಲಾಗುತ್ತದೆ. |

1. ಭೂಮಿ ವಿಷಯಕ್ಕೆ ಸಂಬಂಧಿಸಿದ ಕಡತಗಳನ್ನು ಸಂಬಂಧಿಸಿದಂತೆ ಇದರಲ್ಲಿ ಭೂ ಮಂಜೂರಾತಿ , ಭೂ ಪರಿವರ್ತನೆ, ಭೂ ಕಂದಾಯ ವಿಷಯಗಳನ್ನು ಒಳಗೊಂಡ ಪ್ರಕ್ರಿಯೆ ನಿರ್ವಹಿಸಲಾಗುತ್ತಿದೆ.
2. ಅರಣ್ಯ ವಿಷಯಕ್ಕೆ ಸಂಬಂಧಿಸಿದಂತೆ ಹಂಗಾಮಿ ಲಾಗಣಿ ಮಂಜೂರಿ, ದಿನಾಂಕ 27–4–1978 ರ ಪೂರ್ವದ ಅರಣ್ಯ ಅತಿಕ್ರಮಣ ಸಕ್ರಮಗೊಳಿಸುವದು ಮತ್ತು ಸಾರ್ವಜನಿಕ ಉದ್ದೇಶಕ್ಕಾಗಿ ಅರಣ್ಯ ಭೂಮಿ ಮಂಜೂರಿ ಮಾಡುವದು ಮುಂತಾದ ವಿಷಯಗಳ ನಿರ್ವಹಣೆ.
3. ಸರಕಾರದ ನಿಯಮದಂತೆ ಪ್ರಕೃತಿ ವಿಕೋಪದಡಿಯಲ್ಲಿ ಪರಿಹಾರ ಧನ ಮಂಜೂರಿ ಮಾಡುವದು, ಪ್ರಾಕೃತಿಕ ವಿಕೋಪದಡಿ ಸಾರ್ವಜನಿಕರಿಗೆ ವಸತಿ ಹಾಗೂ ಆಹಾರ ಧಾನ್ಯಗಳನ್ನು ಪೂರೈಸುವ ಪ್ರಕ್ರಿಯೆ.
4. ಪೋಲಿಸ್ ಕಾಯ್ದೆ ಅಡಿಯಲ್ಲಿ ಮನರಂಜನೆ ನಡೆಸುವ ಸ್ಥಳಗಳ ಬಗ್ಗೆ ಲೈಸನ್ಸ ನೀಡುವದು ಹಾಗೂ ನಿರ್ವಹಣೆಯ ಬಗ್ಗೆ ಪರಿಶೀಲಿಸುವದು.
5. ಚುನಾವಣೆ ಕಾಯ್ದೆ ಕೆಳಗೆ ಚುನಾವಣಾ ಕಾರ್ಯ ನಿರ್ವಹಿಸುವುದು. ಜನಗಣತಿ ಕಾರ್ಯ ನಿರ್ವಹಿಸುವುದು.
6. ರಾಷ್ಟ್ರೀಯ ಸಾಮಾಜಿಕ ಕುಟುಂಬ ನೆರವು ಯೋಜನೆಯಡಿಯಲ್ಲಿ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಸಂತ್ರಸ್ಥರಿಗೆ ಅಂತ್ಯ ಸಂಸ್ಕಾರ ಸಹಾಯ ನಿಧಿ, ಭಾಗ್ಯ ಲಕ್ಷ್ಮಿ ಯೋಜನೆ, ಮಡಿಲು ಯೋಜನೆ, ಆದರ್ಶ ವಿವಾಹ ಯೋಜನೆ, ಜನಶ್ರೀ ಯೋಜನೆ, ವಿಧವಾ, ಅಂಗವಿಕಲ, ರಾಷ್ಟ್ರೀಯ ವೃದ್ಧಾಪ್ಯ ವೇತನದ ಯೋಜನೆ, ಸಂಧ್ಯಾ ಸುರಕ್ಷಾ, ಸಂತ್ರಸ್ಥರಿಗೆ ಪರಿಹಾರ ಧನ ವಿತರಣೆ ಕಾರ್ಯಕ್ರಮ.

7. ರಾಜ್ಯ ಹಾಗೂ ಕೇಂದ್ರ ಸರಕಾರದ ವತಿಯಿಂದ ನಡೆಯುವ ಉತ್ಸವಗಳಲ್ಲಿ ಹಾಗೂ ಪಂದ್ಯಾಟಗಳನ್ನು ನಿರ್ವಹಿಸುವಲ್ಲಿ ಕಾರ್ಯ ನಿರ್ವಹಿಸುವುದು.
8. ತಾಲೂಕಿನ ಭೂ ದಾಖಲೆಗಳ ನಿರ್ವಹಣೆ ಮತ್ತು ಎಲ್ಲ ಜಮೀನುಗಳ ಭೂ ಮಾಪನ
9. ಗಾಂವಠಾಣ, ಗೋಮಾಳ, ಗುಂಡುತೋಪು, ಕೆರೆ ಅಂಗಳ, ಉಪ ವನಗಳು ಇತ್ಯಾದಿ ಸಾಮುದಾಯಿಕ ಜಮೀನುಗಳು ಸೇರಿದಂತೆ ಎಲ್ಲಾ ಸರಕಾರಿ ಜಮೀನುಗಳ ನಿರ್ವಹಣೆ ಮತ್ತು ಪರಿಸರ ಸಂರಕ್ಷಣೆ.
10. ಭೂ ಮಂಜೂರಾತಿ. ಅಕ್ರಮ ಸಕ್ರಮ ಸಮಿತಿಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುವುದು
11. ಭೂ ಸುಧಾರಣೆ ಮತ್ತು ಗೇಣಿದಾರಿಕೆ ನಿಭಂದನೆಗಳ ನಿರ್ವಹಣೆ.
12. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಜಮೀನು ರಕ್ಷಣೆ
13. ಭೂ ಪರಿವರ್ತನೆ ಮತ್ತು ಸರಿಯಾದ ರೀತಿಯಲ್ಲಿ ಬಡಾವಣೆಗಳ ಅಭಿವೃದ್ಧಿ
14. ಸಾರ್ವಜನಿಕ ಉದ್ದೇಶಕ್ಕಾಗಿ ಖಾಸಗಿ ಆಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳಲು ಮಾನ್ಯ ಉಪವಿಭಾಗಾಧಿಕಾರಿಗಳಿಗೆ ಸಹಾಯಕರಾಗಿ ಕಾರ್ಯ ನಿರ್ವಹಿಸಲಾಗುವದು.
15. ಸ್ಥಿರಾಸ್ಥಿಗಳ ವ್ಯವಹಾರ, ಉಯಿಸಲು ಒಪ್ಪಂದ, ಇತ್ಯಾದಿಗಳ ನೊಂದಣಿ ಮತ್ತು ಮುದ್ರಾಂಕ ಶುಲ್ಕ ವಸೂಲಾತಿ.

| | |
|---|---|
| ಪರ್ಯಾವೇಕ್ಷಕರು | ಇವರು ತಾಲೂಕಾಧಿಕಾರಿಗಳ ತಾಂತ್ರಿಕ ಸಹಾಯಕರಾತಿ ಭೂಮಾಪನ ವಿಭಾಗದ ದಪ್ತರ ತಪಾಸಣೆ ಕಾರ್ಯನಿರ್ವಹಿಸುವದು, ಕ್ಲಿಷ್ಟಕರವಾದ ಪ್ರಕರಣಗಳಲ್ಲಿ ಪರ್ಯಾವೇಕ್ಷಕರಿಗೆ ಮಾರ್ಗದರ್ಶನ ಮಾಡುತ್ತಾರೆ. ಹಾಗೂ ಪ್ರಕರಣಗಳ ವಿಲೇವಾರಿಗೆ ಸಹ ಜವಾಬ್ದಾರರಾಗಿರುತ್ತಾರೆ. |
| ಶಿರಸ್ತೇದಾರರು | ಕಚೇರಿಯ ಹಾಗೂ ಸಿಬ್ಬಂದಿಗಳ ಮೇಲ್ವಿಚಾರಣೆ/ಅಧೀನ ಕಚೇರಿಗಳ ತಪಾಸಣೆ ಟಿಪ್ಪಣಿ ತಯಾರಿಸುವ ಜವಾಬ್ದಾರಿ/ಕಂದಾಯ ಲೆಕ್ಕ ಪರಿಶೋಧಕರ, ಮಹಾಲೇಖಪಾಲರ ಆಡಿಟ್ ವರದಿ ನಿಖಾಲೆ ಎನ್.ಎಸ್.ಎ.ಪಿ/ ಚುನಾವಣೆ ಇತ್ಯಾದಿ ಕೆಲಸಗಳನ್ನುನಿರ್ವಹಣೆ.. |
| ಪ್ರ.ದ.ಸಹಾಯಕರು | ಕಡತ ಸ್ವೀಕೃತಿಗಳನ್ನು ಮಂಡಿಸಲು 5 ದಿನಗಳವರೆಗೆ ಕಾಲಾವಕಾಶ (ಕೈಪಿಡಿಯಂತೆ) ಹಾಗೂ ವಹಿಸಿದ ಕರ್ತವ್ಯಗಳನ್ನು ಆಯಾ ದಿನವೇ ಅಥವಾ ಮರು ದಿನ ನಿರ್ವಹಿಸತಕ್ಕದ್ದು. |
| ದ್ವಿ.ದ.ಸಹಾಯಕರು | ಕಡತ ಸ್ವೀಕೃತಿಗಳನ್ನು ಮಂಡಿಸಲು 5 ದಿನಗಳವರೆಗೆ ಕಾಲಾವಕಾಶ (ಕೈಪಿಡಿಯಂತೆ) ಹಾಗೂ ವಹಿಸಿದ ಕರ್ತವ್ಯಗಳನ್ನು ಆಯಾ ದಿನವೇ ಅಥವಾ ಮರು ದಿನ ನಿರ್ವಹಿಸತಕ್ಕದ್ದು. |
| ಬೆರಳಚ್ಚುಗಾರರು | ಶಾಖೆಯಲ್ಲಿ ನಿರ್ವಹಿಸಬೇಕಾದ ಕೆಲಸಗಳನ್ನು ಆ ದಿನವೆ ಅಥವಾ ಮರು ದಿನ ನಿರ್ವಹಿಸತಕ್ಕದ್ದು. |
| ವಾಹನ ಚಾಲಕ | ತಮಗೆ ವಹಿಸಲಾದ ಕರ್ತವ್ಯವನ್ನು ಕಾಳಜಿಯಿಂದ ನಿರ್ವಹಿಸುವದು. |
| ' ಡಿ' ದರ್ಜೆ ನೌಕರರು | ತಮಗೆ ವಹಿಸಲಾದ ಕರ್ತವ್ಯಗಳನ್ನು ತಕ್ಷಣ ನಿರ್ವಹಿಸುವದು. |

ನೌಕರರು ಯಾವತ್ತು ಸಂಬಂಧಪಟ್ಟ ಸಂಕಲನದ ಬಗ್ಗೆ ಬಂದ ಸಾರ್ವಜನಿಕ ಅರ್ಜಿಗಳು, ಅಪೀಲುಗಳು ಹಾಗೂ ಅಧೀನ ಕಾರ್ಯಾಲಯದಿಂದ ಬಂದ ಕಡತಗಳನ್ನು ಕಾಯ್ದೆ ಮಿತಿಯಲ್ಲಿ ಪರಿಶೀಲಿಸಿ, ಆಧಿಕಾರಿಗಳಿಗೆ ಕಚೇರಿಯ ವ್ಯವಸ್ಥಾಪಕರ ಮುಖಾಂತರ ಟಿಪ್ಪಣಿಯೊಂದಿಗೆ ಮಂಡಿಸಿ ಅಧಿಕಾರಿಗಳಿಂದ ಅಂದರೆ ಕಚೇರಿ ಮುಖ್ಯಸ್ಥರಿಂದ ಆದೇಶ ಪಡೆದು ಆ ಆದೇಶದಂತೆ ಮುಂದಿನ ಕ್ರಮ ಕೈಕೊಂಡು ಕೆಲಸ ನಿರ್ವಹಿಸುತ್ತಾರೆ.

ಈ ಕೆಳಗಿನಂತೆ ಸಂಕಲನದ ಹಂಚಿಕೆ ಮಾಡಲಾಗಿದೆ.

**ತಹಶೀಲ್ದಾರ, ಶಿರಸಿ ರವರ ಕಾರ್ಯಾಲಯದ ಸಿಬ್ಬಂದಿಗಳು ಹೊಂದಿರುವ ಸಂಕಲನಗಳ ವಿವರ**

| | | |
|---|---|---|
| 1 | ಶ್ರೀ ವಿ. ಟಿ. ಹೆಗಡೆ, | ತಾಲೂಕ ಆಡಳಿತ ಶಿರಸ್ತೇದರರು ಹಾಗೂ ಭೂಮಿ ಶಿರಸ್ತೇದಾರರು |
| 2 | ಶ್ರೀ ವಿ. ಜಿ. ನಾಯ್ಕ, ಪ್ರದಸ | ಭೂಮಿ, ಭೂಸುಧಾರಣೆ |
| 3 | ಮಂಜುಳಾ ಭಟ್ಕಳ, ದ್ವಿದಸ | ಆರ್.ಆರ್.ಟಿ. |
| 4 | ಸೋನಾ ಕೋಠಾರಕರ, ಪ್ರ.ದ.ಸ. | ಆರ್‌ಇವಿ, ಆರ್,.ಆರ್,ಸಿ, ವರ್ಕಡನ್ |
| 5 | ಕು: ಪ್ರೀತಿ ಟಿ. ನಾಯ್ಕ | ಕಿಯೋಸ್ಕ |
| 6 | ವಿಧ್ಯಾ ಹೆಗಡೆ, ದ್ವಿದಸ | ಸಿಬ್ಬಂದಿ ಮತ್ತು ಲೆಕ್ಕಪತ್ರ |
| 7 | ಕು: ಪ್ರಮೋದ ನಾಯ್ಕ, ಗ್ರಾ.ಲೆ. | ಕಿಯೋಸ್ಕ |
| 8 | ವನಿತಾ ರಘುನಾಥಿ, ದ್ವಿದಸ | ಆರಾಧನಾ, ಡಿವಿ.ಎಸ್. |
| 9 | ಪ್ರದೀಪ ಜಿ ನಾಯ್ಕ, ಗ್ರಾ.ಲೆ | ಕಿಯೋಸ್ಕ |
| 10 | ಕೊಟ್ರೇಶ ಯು. ಗ್ರಾ.ಲೆ. | ಕಿಯೋಸ್ಕ |
| 11 | ಮಂಜುಳಾ ಟಿ. ನಾಯ್ಕ, ದ್ವಿ.ದ.ಸ | ಜನಗಣತಿ, ಎಂಎಜಿ, ಬಾಲಕಾರ್ಮಿಕ, ಜೀತದಾಳು, ಎಸ್‌ಸಿ/ಎಸ್‌ಟಿ ಪ್ರಮಾಣ ಪತ್ರ. |
| 12. | ವಾಮನರಾವ ಬರ್ಗೆ, ಗ್ರಾ.ಲೆ | |

| | | |
|---|---|---|
| 13. | ಹರಿಶ್ಚಂದ್ರ ಚಮಗಾರ, ಗ್ರಾಲೆ | ಆವಕ–ಜಾವಕ, ಪಿ.ಜಿ.ಸಿ. |
| 16 | ರಶ್ಮಿ ಡಿ. ನಾಯ್ಕ, ಗ್ರಾ.ಲೆ.(ಹೆ), ಶಿರಸಿ | ಸಕಾಲ/ ಸಿ.ಎ.ಎಲ್ |
| 17. | ಶ್ರೀಧರ ಟಿ. ಚಿನ್ನಸ್ವಾಮಿ, ಬೆರಳಚ್ಚುಗಾರ | ಬೆರಳಚ್ಚು ಕೆಲಸ |

| | | |
|---|---|---|
| 1. | ಶ್ರೀಮತಿ ಜಲಜಾಕ್ಷಿ, ಶಿರಸ್ತೇದಾರ(ಸಾ.ಭ.ಯೋ.ವಿಭಾಗ) | ಸಾಮಾಜಿಕ ಭದ್ರತಾ ಯೋಜನೆಯ ಮೇಲುಸ್ತುವಾರಿ ಹಾಗೂ ಹಿಂದುಳಿದ ಮತ್ತು ಪರಿಶಿಷ್ಟ ಜಾತಿ/ಪಂಗಡಗಳಿಗೆ ಸಂಬಂಧಿಸಿದಂತೆ ಮತ್ತು ಇತರೇ ಎಲ್ಲಾ ವರ್ಗಗಳ ಮೇಲುಸ್ತುವಾರಿ. ಅಭಿಲೇಖಾಲಯ ಮೇಲುಸ್ತುವಾರಿ. |
| 2. | ಶ್ರೀಮತಿ ಅನಿತಾ ಗಾಂಜೇಕರ, ಪ್ರದಸ | (ಸಾಮಾಜಿಕ ಭದ್ರತಾ ಯೋಜನೆಗಳು) ಎನ್.ಎಸ್.ಎ.ಪಿ. ಒಎಪಿ, ಪಿಎಚ್‌ಪಿ, ಡಿಡಬ್ಲ್ಯೂಪಿ, ಸಂಧ್ಯಾ ಸುರಕ್ಷಾ, ಹಾಗೂ ನೆಮ್ಮದಿ ನಾಡಕಚೇರಿ, ರೆಡ್ ಕ್ರಾಸ್, ಅರಣ್ಯ |
| 3. | ರಾಧಾ. ಬೋರಕರ, ಪ್ರದಸ | ಆದಾಯ, ಹಿಂದುಳಿದ ವರ್ಗಗಳ ಜಾತಿ ಆದಾಯ ಪ್ರಪತ್ರ |
| 4. | ಕೆ. ಎನ್. ಗೌಡಾ, ದ್ವಿದಸ | ಅಭಿಲೇಖಾಲಯ, ಮಾಹಿತಿಹಕ್ಕು |
| 5. | ಕೆ.ಎಸ್. ನೇತ್ರೆಕರ, ದ್ವಿದಸ | ಎ.ಡಿ.ಎಂ. ಮತ್ತು ರೆಡ್ ಕ್ರಾಸ್. |
| 1. | ಶ್ರೀಮತಿ ಉಷಾ ಪಾವುಸ್ಕರ, ಶಿರಸ್ತೇದಾರ ಚುನಾವಣೆ | ಚುನಾವಣೆ ವಿಷಯಗಳ ಮೇಲುಸ್ತುವಾರಿ. |
| 2. | ರಾಘವೇಂದ್ರ ಗಿರಡ್ಡಿ, ದ್ವಿದಸ | ಚುನಾವಣೆ |
| 1. | ಶ್ರೀ ಜಿ. ಜಿ. ಪಟಗಾರ, ಶಿರಸ್ತೇದಾರರು (ಆಹಾರ ವಿಭಾಗ) | ಆಹಾರ ಶಾಖೆಯ ಉಸ್ತುವಾರಿ. |
| 2. | ಬಿ. ನಾಗರಾಜಪ್ಪ, ಆಹಾರ ನಿರೀಕ್ಷಕರು, ನಗರ | ಆಹಾರ ವಿಭಾಗ |
| 1. | ಶ್ರೀ ಎಸ್. ಜಿ. ಭಟ್, ತಪಾಸಕರು | |
| 2. | ಸಂದೀಪ ಪೈ, ದ್ವ.ದ.ಭೂ | 11ಇ. ಸಿಟಿ ಸರ್ವೆ |
| 3. | ವಿಜಯಕುಮಾರ, ಪ್ರ.ಸ | ಪ್ರದಸ, ಫೋಡಿ ದುರಸ್ತಿ |
| 4. | ನಾಗರಾಜ ನಾಯ್ಕ, ಕೆ.ಎಚ್. ಭೂಮಾಪಕರು | ಸರ್ವೆ |
| 5. | ಕೊಟ್ರೇಶ್, ಭೂಮಾಪಕರು | ಸರ್ವೆ |
| 6. | ಜಿ. ಟಿ. ಪವಾರ, ಭೂಮಾಪಕರು | ಸರ್ವೆ |
| 7. | ಆರ್.ಎ. ಭಟ್ಟ, ಸಿಟಿ ಸರ್ವೆ ಭೂಮಾಪಕರು | ಸಿಟಿ ಸರ್ವೆ |
| 8. | ಪಿ.ಎಲ್. ಫರ್ನಾಂಡೀಸ, ದ್ವಿ.ದ.ಸ. | ಸಿಟಿ ಸರ್ವೆ. |

**ಶಿರಸಿ ತಾಲೂಕಿನ ಹೋಬಳಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮಲೆಕ್ಕಾಧಿಕಾರಿಗಳ ವಿವರ.**

**ಹೋಬಳಿ: ಶಿರಸಿ**

| ಅ. ನಂ. | ಸಿಬ್ಬಂದಿಯ ಹೆಸರು | ಯಾವ ಫಿರ್ಕಾದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ | ಅಂಚೆ ವಿಳಾಸ | ಮೊಬೈಲ್ ನಂಬರ |
|---|---|---|---|---|
| 1. | ಶ್ರೀ ಜಿ. ಎಮ್. ಹೆಗಡೆ | ಶಿರಸಿ | ಶಿರಸಿ ಕಸಬಾ, ಶಿರಸಿ | 9480653464 |
| 2. | ಶ್ರೀಮತಿ ಪುಷ್ಪಾ ಶೆಟ್ಟಿ, | ಹೀಪನಳ್ಳಿ | ಪೋ: ಹೀಪನಳ್ಳಿ, ತಾ: ಶಿರಸಿ | 9686217255 |
| 3. | ಶ್ರೀಮತಿ ಎಂ. ಬಿ. ಫರ್ನಾಂಡೀಸ್ | ಮುಂಡಿಗೇಸರ | ಪೋ: ಮುಂಡಿಗೇಸರ ತಾ: ಶಿರಸಿ | 9916772355 |
| 4. | ಶ್ರೀಮತಿ ಆಶಾ ಭಟ್ಟ | ಕಾನಗೋಡ, ದೊಡ್ನಳ್ಳಿ | ಪೋ: ಕಾನಗೋಡ, ತಾ: ಶಿರಸಿ | 9916739158 |
| 5. | ಶ್ರೀ ಪಿ. ಎಸ್. ವೇಟೆಕರ | ಇಸಳೂರು | ಪೋ: ಇಸಳೂರು, ತಾ: ಶಿರಸಿ | 9448818498 |
| 6. | ಶ್ರೀ ಜಿ. ಆರ್. ಪಾವಸ್ಕರ | ಕುಳವೆ | ಪೋ: ಕುಳವೆ, ತಾ: ಶಿರಸಿ | 7795223943 |
| 7. | ಶ್ರೀಮತಿ ಶಾಂತಾ ಶೆಟ್ಟಿ, | ಅಜ್ಜೀಬಳ | ಪೋ: ಅಜ್ಜೀಬಳ ತಾ: ಶಿರಸಿ | --- |
| 8. | ಕು: ರಶ್ಮಿ ನಾಯಕ, | ಶಿರಸಿ (ಹೆಚ್ಚುವರಿ) | ತಹಶೀಲ್ದಾರ ಕಛೇರಿ, ಶಿರಸಿ | 9901240857 |

ಹೋಬಳಿ: ಬನವಾಸಿ

| | | | | |
|---|---|---|---|---|
| 1. | ಶ್ರೀ ಕಿರಣ ಕುರಿ | ಬನವಾಸಿ | ಪೋ: ಬನವಾಸಿ ತಾ: ಶಿರಸಿ | 8453316897 |
| 2. | ಶ್ರೀ ಬಸವರಾಜ ಮಲ್ಲಮ್ಮನವರ | ಬಂಕನಾಳ, ಗುಡ್ನಾಪುರ, ಬದನಗೋಡ | ಪೋ: ಬಣಕನಾಳ, ತಾ: ಶಿರಸಿ | 9481117331 |
| 3. | ಶ್ರೀ ಬಿ. ಆರ್. ಕಿಣಿ | ಬೀಳೂರ, ಬಿಸಲಕೊಪ್ಪ | ಪೋ: ಬೀಳೂರ ತಾ: ಶಿರಸಿ | 9242911621 |
| 4. | ಶ್ರೀ ಆರ್. ಎಂ. ನಾಯ್ಕ | ಸುಗಾವಿ, ಉಂಚಳ್ಳಿ | ಪೋ: ಸುಗ್ವಿ, ತಾ: ಶಿರಸಿ | 9449923185 |

ಹೋಬಳಿ: ಸಂಪಖಂಡ

| | | | | |
|---|---|---|---|---|
| 1. | ಶ್ರೀ ರಮೇಶ ಬಿ ಹೆಗಡೆ, | ಉಪತಃಶೀಲ್ದಾರ | ಸಂಪಖಂಡ | |
| 2. | ಶ್ರೀ ಬಿ. ಎನ್. ಶೆಟ್ಟಿ, | ಕಂದಾಯ ನಿರೀಕ್ಷಕರು | ಸಂಪಖಂಡ | |
| 3. | ಶ್ರೀ ಮಂಜುನಾಥ ಯು. ಜಿ | ಗ್ರಾಮಲೆಕ್ಕಾದಿಕಾರಿ | ನೆಗ್ಗು | |
| 4. | ಶ್ರೀ ದೀಪಕ ಬಿ. ಮುಷ್ಕಿಗೇರಿ, | ಗ್ರಾಮಲೆಕ್ಕಾಧಿಕಾರಿ | ಶಿವಳ್ಳಿ | |
| 5. | ಶ್ರೀ ಜಾಹೀರಾಬಾನು ಎ ಸತ್ತಾರ | ಗ್ರಾಮಲೆಕ್ಕಾದಿಕಾರಿ | ಸಂಪಖಂಡಮ ದೇವನಹಳ್ಳಿ | |

ಹೋಬಳಿ: ಹುಲೇಕಲ್

| | | | | |
|---|---|---|---|---|
| 1. | ಶ್ರೀ ಎಸ್. ಎಂ ಹೆಗಡೆ, | ಉಪತಃಶಿಲ್ದಾರ | ಹುಲೇಕಲ್ | |
| 2. | ಶ್ರೀ ಎಸ್. ಎನ್. ಶೇಟಿಯಾ | ಕಂದಾಯ ನಿರೀಕ್ಷಕರು | ಹುಲೇಕಲ್ | |
| 3. | ಶ್ರೀ ಕಿರಣ ನಾಯ್ಕ | ಗ್ರಾಮಲೆಕ್ಕಾಧಿಕಾರಿ | ಹುಲೇಕಲ್ | |
| 4. | ಶ್ರೀಮತಿ ಲತಾ ಶಾನಬಾಗ, | ಗ್ರಾಮಲೆಕ್ಕಾಧಿಕಾರಿ | ಸಾಲ್ಕಣಿ, ಮೇಲಿನಓಣಿಕೇರಿ | |
| 5. | ಶ್ರೀ ಭರಮನಾಯ್ಕ, ಮ್ಯಾಗೇರಿ, | ಗ್ರಾಮಲೆಕ್ಕಾದಿಕಾರಿ | ಸೋಂದಾ | |

**(V) ಕಚೇರಿಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು :–**

1. ಕಚೇರಿ ಕಾರ್ಯವಿಧಾನ ಕೈಪಿಡಿ
2. ಇಂಡಿಯನ್ ಎಕ್ಸಪ್ಲೋಸಿವ್ ಎಕ್ಟ 1940
3. ಇಂಡಿಯನ್ ಆರ್ಮ್ಸ ಆಕ್ಟ 1955
4. ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು–1957
5. ಕರ್ನಾಟಕ ಆರ್ಥಿಕ ಸಂಹಿತೆ 1958
6. ಕರ್ನಾಟಕ ಖಜಾನೆ ಸಂಹಿತೆ 1963
7. ಸಾದಿಲ್ವಾರು ವೆಚ್ಚ ಕೈಪಿಡಿ–1958
8. ಸೇವಾ ವಿಷಯಕ್ಕೆ ಸಂಬಂಧಿಸಿದ ನಿಯಮಗಳು
9. ಕರ್ನಾಟಕ ನಾಗರಿಕ ಸೇವಾ (ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳು)ನಿಯಮಗಳು 1994
10. ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ )ನಿಯಮಗಳು 1957
11. ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966
12. ಮಾಹಿತಿ ಹಕ್ಕು ಅಧಿನಿಯಮ –2005
13. ಸೇವಾ ವಿಷಯಕ್ಕೆ ಸಂಬಂಧಿಸಿದಂತೆ ಹೊರಡಿಸಿದ ಸರಕಾರಿ ಆದೇಶಗಳು, ಅಧಿಸೂಚನೆ ಇತ್ಯಾದಿ
14. ಟ್ರೆಜರಿ ಮ್ಯಾನ್ಯುವಲ್
15. ಜೀತದಾಳು ನಿರ್ಮೂಲನಾ ಕಾಯ್ದೆ
16. ಬಾಲಕಾರ್ಮಿಕ ನಿರ್ಮೂಲನಾ ಕಾಯ್ದೆ
17. ಆಯುಧ ಆಧಿನಿಯಮ ಕಾಯ್ದೆ
18. ಪುನರ್ ವಸತಿ ಕಾಯ್ದೆ
19. ಮನರಂಜನೆ ಕಾಯ್ದೆ
20. ಸ್ಫೋಟಕ ಅಧಿನಿಯಮ 1884
21. ಬಾಲ ಅಪರಾಧಿಗಳ ನೆರವು ಕಾಯ್ದೆ

22. ಗಣಿ ಅಧಿನಿಯಮ 1952
23. ಕಚೇರಿ ಗೌಪ್ಯತೆ ಕಾಯ್ದೆ 1923
24. ಪೆಟ್ರೋಲಿಯಂ ಅಧಿನಿಯಮ 1934
25. ಪೋಯಜನ್ ಕಾಯ್ದೆ 1919
26. ಪ್ರಾಣಿ ದಯಾ ಆಧಿನಿಯಮ 1960
27. ಅವಶ್ಯಕ ವಸ್ತು ಕಾಯ್ದೆ 1980
28. ಅವಮಾನಕರ ನಿಂದನೆ ಕಾಯ್ದೆ 1911
29. ಪರಿಶಿಷ್ಟ ಜ್ಯಾತಿ, ಪರಿಶಿಷ್ಟ ಪಂಗಡಗಳ ದೌರ್ಜನ್ಯ ನಿರ್ಮೂಲನಾ ಕಾಯ್ದೆ 1989
30. ಕಾಯ್ದೆಬಾಹೀರ ಚಟುವಟಿಕೆ ನಿಯಂತ್ರಣ ಕಾಯ್ದೆ 1967
31. ವಕ್ಫ ಕಾಯ್ದೆ 1944 ಹಾಗೂ ಇತರೆ ಮಾಹಿತಿಗಳು ಹಾಗೂ ಇನ್ನಿತರೆ ಕೈಪಿಡಿಗಳು
32. ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳು ಅಧಿನಿಯಮ 1997
33. ಕರ್ನಾಟಕ ಲ್ಯಾಂಡ ರೆವಿನ್ಯೂ ಆಕ್ಟ 1964
34. ಕರ್ನಾಟಕ ಲ್ಯಾಂಡ ರಿಫಾರ್ಮ್ಸ ಆಕ್ಟ 1961
35. ಕರ್ನಾಟಕ ಲ್ಯಾಂಡ ಗ್ರಾಂಟ್ ರೂಲ್ಸ 1989
36. ಕರ್ನಾಟಕ ಷೆಡ್ಯೂಲ್ ಕಾಸ್ಟ ಎಂಡ್ ಷೆಡ್ಯೂಲ ಟ್ರೈಬ್ಸ ಆಕ್ಟ 1978
37 ಕರ್ನಾಟಕ ಹಲವು ಇನಾಂ ಪದ್ಧತಿ ಅಧಿನಿಯಮ 1961
38 ಕರ್ನಾಟಕ ಗ್ರಾಮ ನೌಕರಿಗಳ ರದ್ದತಿ ಅಧಿನಿಯಮ 1961
39 ಕರ್ನಾಟಕ ಋಣ ವಿಮೋಚನಾ ಅಧಿನಿಯಮ 1976
40 ಮತದಾರರ ನೊಂದಣಿ ನಿಯಮಾವಳಿ 1960
41 ಕರ್ನಾಟಕ ಸಾರ್ವಜನಿಕ ಆವರಣಗಳ ಅಧಿನಿಯಮ 1974 ಮತ್ತು ಅದರಡಿಯ ನಿಯಮಾವಳಿ
42 ಕರ್ನಾಟಕ ಪೋಲಿಸ ಅಧಿನಿಯಮ 1963
43 ಪ್ರಾಣಿಗಳಿಗೆ ಹಿಂಸೆ ಅಧಿನಿಯಮ 1960
44. ಕರ್ನಾಟಕ ಆಹಾರ ಮತ್ತು ನಾಗರೀಕ ಸೇವಾ ಅಧಿನಿಯಮ
45 ಇನ್ನು ಹಲವಾರು ಕಾಯ್ದೆ ಪುಸ್ತಕಗಳನ್ನೊಳಗೊಂಡಿರುತ್ತದೆ.

**(VI) ಶಿರಸಿ ತಾಲೂಕು ಸ್ವಾಧೀನದಲ್ಲಿರುವ ದಸ್ತಾವೇಜುಗಳ ವಿವರಗಳು :–**

1. ಸೇವಾ ಪುಸ್ತಕಗಳು (ಗ್ರೂಪ್–'ಸಿ ' ಹಾಗೂ 'ಡಿ' ನೌಕರರಿಗೆ ಸಂಬಂಧಿಸಿದ್ದು)
2. ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಹೊರಡಿಸಿದ ಸರ್ಕಾರಿ ಆದೇಶಗಳು ಅಧಿಸೂಚನೆ ಇತ್ಯಾದಿ
3. ಸಾಮಾನ್ಯ ಸ್ವೀಕೃತಿ ವಹಿ
4. ರವಾನೆ ವಹಿ
5. ಸ್ಟಾಂಪ್ ವಹಿ
6. ನಗದು ಪುಸ್ತಕ
7. ಹಾಜರಿ ಮಸ್ತಕ
8. ಖರ್ಚು–ವೆಚ್ಚಗಳ ಪುಸ್ತಕ
9. ಡಿ.ಸಿ.ಬಿಲ್ಲು ಪುಸ್ತಕ
10. ನಗದೀಕರಣ ಪುಸ್ತಕ
11. ವೇತನ ಪಾವತಿ ಮಸ್ತಕ
12. ಪೀಠೋಪಕರಣ ಮತ್ತು ಇತರೆ ಸಾಮಗ್ರಿಗಳ ವಹಿ
13. ಕಛೇರಿಯ ಆದೇಶ ಪುಸ್ತಕ
14. ಸಿಬ್ಬಂದಿಗಳ ರಜೆ ಲೆಕ್ಕಗಳು
15. ಗ್ರಂಥಾಲಯ ವಹಿ
16. ವೈಯಕ್ತಿಕ ವಹಿ

17. ಸಿಬ್ಬಂದಿಗಳ ನೋಂದಣಿ ವಹಿ
18. ಸಿಬ್ಬಂದಿಗಳ ಹಾಜರಾತಿ ವಹಿ
19. ತಹಶೀಲದಾರ ಶಿರಸಿರವರ ದಿನಚರಿ

ಇವುಗಳನ್ನು ಹೊರತುಪಡಿಸಿ ಶಿರಸಿ ತಾಲೂಕು ಕಛೇರಿ ಕಾರ್ಯಾಲಯದಲ್ಲಿ ಮೇಲೆ ರೂಪಿಸಲಾದ ಕಾಯ್ದೆ ನಿಯಮಗಳಡಿ ನಿರ್ವಹಿಸುವ ಎಲ್ಲಾ ಕಡತಗಳಲ್ಲಿ ಅಂತಿಮ ಆದೇಶ ನೀಡಿ ಮುಕ್ತಾಯವಾದ ನಂತರ ಪ್ರತಿ ಕಡತಗಳ ಪ್ರಾಮುಖ್ಯತೆಯನ್ನು ಅನುಸರಿಸಿ ಪ್ರವರ್ಗ ಎ. ಬಿ. ಸಿ. ಡಿ ಮತ್ತು ಇ ಎಂದು ವರ್ಗಿಕರಿಸಿ ನಿರ್ವಹಿಸಲಾಗುತ್ತದೆ. ಪ್ರತಿ ವರ್ಗಿಕರಣದ ಅವಧಿ ಕೆಳಕಂಡಂತಿರುತ್ತದೆ.

| | | |
|---|---|---|
| ಎ | ಇಂಡೆಕ್ಸ | ಶಾಶ್ವತ |
| ಬಿ | ಇಂಡೆಕ್ಸ | 30 ವರ್ಷಗಳು |
| ಸಿ | ಇಂಡೆಕ್ಸ | 10 ವರ್ಷಗಳು |
| ಡಿ | ಇಂಡೆಕ್ಸ | 5 ವರ್ಷಗಳು 3 |
| ಇ | ಇಂಡೆಕ್ಸ | 1 ವರ್ಷ |

**(VII) ಕಾರ್ಯನೀತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನಪ್ರತಿನಿಧಿಗಳ ಜೊತೆ**

ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು ವಿಷಯ ನಿರ್ವಾಹಕರು ಸ್ವೀಕೃತವಾದ ಟಪಾಲುಗಳನ್ನು 5 ದಿನಗಳೊಳಗಾಗಿ ಮಂಡಿಸಿ ನಿಖಾಲೆ ಗೊಳಿಸುವಂತೆ ಕಾಲಾವಕಾಶ ನಿಗದಿಪಡಿಸಲಾಗಿದೆ.

ಸಾರ್ವಜನಿಕರು ನಕಲನ್ನು ಬೇಡಿ ಸಲ್ಲಿಸಿದ ಅರ್ಜಿಗಳನ್ನು ಪರಿಶೀಲಿಸಿ 7 ದಿನಗಳೊಳಗಾಗಿ ನಕಲು ಪ್ರತಿಯನ್ನು ನೀಡಲು ಕಾಲಾವಕಾಶ ನಿಗದಿಪಡಿಸಲಾಗಿದೆ.

ಆಪೀಲುಗಳನ್ನು ನಿಖಾಲೆಗೊಳಿಸಲು 3 ತಿಂಗಳ ಕಾಲಾವಕಾಶ ನಿಗದಿಪಡಿಸಲಾಗಿದೆ.

ಕಾಲಾವಧಿ ನಿಗದಿಪಡಿಸಿದ ಬಗ್ಗೆ ತಖ್ತೆ:ಯನ್ನು ತಯಾರಿಸಿ ಸಾರ್ವಜನಿಕರ ಗಮನಕ್ಕಾಗಿ ಕಚೇರಿಯ ಸೂಚನಾ ಫಲಕಕ್ಕೆ ಅಂಟಿಸಿಡಲಾಗಿದೆ.

ಮಾಹಿತಿಯನ್ನು ಪಡೆಯುವುದಕ್ಕಾಗಿ ಬರುವ ನಾಗರೀಕರಿಗೆ ಅನುಕೂಲತೆಗಳನ್ನು ಹಾಗೂ ಸೌಕರ್ಯಗಳನ್ನು ನೀಡಲಾಗಿದೆ. ಬಂದ ಸಾರ್ವಜನಿಕರಿಗೆ ಕುಳಿತುಕೊಳ್ಳಲು ವ್ಯವಸ್ಥೆ ಕಲ್ಪಿಸಿಕೊಡಲಾಗಿದೆ. ಅರ್ಜಿಗಳನ್ನು ತಕ್ಷಣ ಪಡೆಯುವುದಕ್ಕಾಗಿ ಯಾವತ್ತೂ ಸೌಕರ್ಯ ಕಲ್ಪಿಸಿಕೊಡಲಾಗಿದೆ.

**ನಾಗರೀಕ ಸನ್ನದ್ದು**

ಶಿರಸಿ ತಾಲೂಕಿನ ಸಾರ್ವಜನಿಕ ಅನುಕೂಲಕ್ಕಾಗಿ ಕಂದಾಯ ಇಲಾಖೆಯು ವಿವಿಧ ಸೇವೆಗಳನ್ನು ಒದಗಿಸುತ್ತದೆ. ಮಾಹಿತಿ ಮತ್ತು ಸೇವೆಗಳ ಸೌಲಭ್ಯವನ್ನು ಜನಸಾಮಾನ್ಯರಿಗೆ ನೀಡುವ ದೃಷ್ಟಿಯಲ್ಲಿ ಕಚೇರಿಯು ನಾಗರೀಕ ಸನ್ನದ್ದು ಪ್ರಕಟಿಸಿದೆ. ಈ ಸನ್ನಿಧಿಯಲ್ಲಿ ಸಾರ್ವಜನಿಕರು ಯಾವ ಯಾವ ಸೇವೆ ಮಾಹಿತಿ ದಾಖಲೆಗಳನ್ನು ಪಡೆಯಬಹುದು ಮಾಹಿತಿಯ ಮಾರ್ಗದರ್ಶಿಯಾಗಿದೆ.

1. ಗ್ರಾಮೀಣ ನೆಲಸಿಗರ ದೃಡೀಕರಣ ಪತ್ರ
2. ಖಾತೆ ಹಕ್ಕು ಬದಲಾವಣೆ ಪತ್ರ
3. ಹಕ್ಕು ಬದಲಾವಣೆ ಅಂಗೀಕಾರ
4. ವಾರಸುದಾರರ ಖಾತೆ ಬದಲಾವಣೆ
5. ಬೇಬಾಕಿ ಪ್ರಮಾಣ ಪತ್ರ (ಭೂ ಕಂದಾಯ ನೀರು ತೆರಿಗೆ)
6. ಕೃಷಿ ಕಾರ್ಮಿಕ ಪ್ರಮಾಣ ಪತ್ರ
7. ಜಾತಿ/ಆದಾಯ ಪ್ರಮಾಣ ಪತ್ರ
8. ನೆಲಸಿಗರ ಪ್ರಮಾಣ ಪತ್ರ
9. ವಾಸ ದೃಡೀಕರಣ ಪತ್ರ
10 ಕುಟುಂಬ ಉತ್ತರ ಜೀವಿ ಸಮರ್ಥನಾ ಪತ್ರ
11 ಜನಸಂಖ್ಯಾ ಪ್ರಮಾಣ ಪತ್ರ
12 ರಾಷ್ಟ್ರೀಯ ಪ್ರಮಾಣ ಪತ್ರ
13 ಕೃಷಿ ಹೊಂದಿರುವ ಪ್ರಮಾಣ ಪತ್ರ
14 ಹೆಚ್ಚುವರಿ ಭೂ ರಹಿತ ಪ್ರಮಾಣ ಪತ್ರ
15 ಭೂ ಮೌಲ್ಯ ದೃಡೀಕರಣ ಪತ್ರ
16 1999–2000 ಕ್ಕಿಂತ ಮುಂಚಿತ ಹಕ್ಕು ದಾಖಲೆಗಳು
17 ಹಕ್ಕು ಬದಲಾವಣೆ ಅಂಗೀಕಾರ
18 ವಿಭಜನೆ

19 ವಾರಸುದಾರರ ಖಾತೆ ಬದಲಾವಣೆ

20 ಮಂಜೂರಾದ ಜಮೀನು ನೊಂದಾಯಿಸಲು ನಿರಾಪೇಕ್ಷಣಾ ಪತ್ರ

21 ನ್ಯಾಯಾಲಯದ ಆದೇಶ ಪ್ರತಿ

22 ಭೂ ಪರಿವರ್ತನೆ

23 ಇಂದಿರಾ ಗಾಂದಿ ರಾಷ್ಟ್ರೀಯ ವೃದ್ಧಾಪ್ಯ ವೇತನ

24 ಅಂಗವಿಕಲ ವೇತನ

25 ವಿಧವಾ ವೇತನ

26 ಅಂತ್ಯ ಸಂಸ್ಕಾರ ಸಹಾಯ ನಿಧಿ ನೀಡುವದು

27 ರಾ.ಸಾ.ಕು. ನೆ. ಯೋಜನೆ ಫಲಾನುಭವಿ ಯೋಜನೆ

28 ಸಂದ್ಯಾ ಸುರಕ್ಷಾ ಯೋಜನೆ

29 ಆದರ್ಶ ವಿವಾಹ ಯೋಜನೆ

30 ಹೊಸ ಪಡಿತರ ಚೀಟಿ/ಪಡಿತರ ಚೀಟಿಯಲ್ಲಿ ಹೆಸರು ಸೇರಿಸುವದು/ಕೈಬಿಡುವದು

31 ಅಧ್ಯರ್ಪಣ ಪ್ರಮಾಣ ಪತ್ರ ನೀಡಿದಾಗ ನೀಡುವ ಹೊಸ ಪಡಿತರ ಚೀಟಿ

32 ಪಡಿತರ ಚೀಟಿ ಅದ್ಯರ್ಪಣ ಪ್ರಮಾಣ ಪತ್ರ

33 ಪ್ರಕೃತಿ ವಿಕೋಪ ಪರಿಹಾರ

34 ಬೆಳೆ ನಾಶ ಪರಿಹಾರ

**(VIII)** ಸಲಹೆಗಳನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳು ಮತ್ತು ಇವುಗಳು ನಡೆಸುವ ಸಭೆಗಳು ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಯ ನಡವಳಿಕೆಗಳು ಸಾರ್ವಜನಿಕರಿಗೆ ಲಭ್ಯವಿರುವುದೇ.

ಇಂತಹ **ನಮೂನೆಗಳು** ಯಾವುದೂ ಇರುವುದಿಲ್ಲ.

**(IX)** ಕಛೇರಿಯ ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ:

ತಹಶೀಲ್ದಾರ, ಶಿರಸಿ ವಿಭಾಗದ ಮುಖ್ಯಸ್ಥರಿಗೆ ಸರ್ಕಾರ / ಇಲಾಖೆ ನೀಡಿದ ಹಕ್ಕು ಬಾದ್ಯತೆಗಳಿಗನುಗುಣವಾಗಿ ಕರ್ತವ್ಯ ನಿರ್ವಹಣೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಕಾರ್ಯಕಾರಿ | ಖಾಲಿ |
|---|---|---|---|---|
| 1) | **ತಹಶೀಲ್ದಾರ, ಶಿರಸಿ**<br>ಶ್ರೀ ಬಸಪ್ಪ ಪಿ. ಪೂಜಾರಿ | 1 | 1 | – |
| 2) | **ಶಿರಸ್ತೇದಾರರು**<br>ಶ್ರೀ ವಿ. ಟಿ. ಹೆಗಡೆ, ಆಡಳಿತ<br>ಶ್ರೀಮತಿ ಜಲಜಾಕಿ, ಸಾಮಾಜಿಕ ಭದ್ರತಾ ಯೋಜನೆ<br>ಶ್ರೀಮತಿ ಉಷಾ ಪಾವುಸ್ಕರ, ಚುನಾವಣೆ<br>ಶ್ರೀ ಜಿ. ಜಿ. ಪಟಗಾರ, ಆಹಾರ ಶಿರಸ್ತೇದಾರರು | 04 | 04 | –– |
| 4) | **ಪ್ರಥಮ ದರ್ಜೆ ಸಹಾಯಕರು ಹಾಗೂ ಆಹಾರ ನಿರೀಕ್ಷಕರು**<br>ಶ್ರೀ ವಿ. ಜಿ. ನಾಯ್ಕ,<br>ಶ್ರೀಮತಿ ಸೋನಾ ಕೊಠಾರಕರ<br>ಶ್ರೀಮತಿ ಅನೀತಾ ಗಾಂಜೇಕರ,<br>ಶ್ರೀಮತಿ ರಾಧಾ ಬೋರಕರ<br>ಶ್ರೀ ನಾಗರಾಜಪ್ಪ. ಆಹಾರ ನಿರೀಕ್ಷಕರು | 08 | 05 | 03 |
| 5) | **ದ್ವಿತೀಯ ದರ್ಜೆ ಸಹಾಯ್ಕರು**<br>ಶ್ರೀಮತಿ ವಿದ್ಯಾ ಹೆಗಡೆ<br>ಶ್ರೀಮತಿ ವನಿತಾ ರಘುನಾಥಿ<br>ಶ್ರೀ ಮಂಜುಳಾ ಟಿ.ನಾಯ್ಕ<br>ಶ್ರೀಮತಿ ಮಂಜುಳಾ ಭಟ್ಕಳ | 11 | 10 | 01 |

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಕಾರ್ಯಕಾರಿ | ಖಾಲಿ |
|---|---|---|---|---|
| | ಶ್ರೀ ಕೆ. ಎನ್. ಗೌಡ | | | |
| | ಶ್ರೀ ಕೆ. ಎಸ್. ನೇತ್ರಕರ | | | |
| | ಶ್ರೀ ಮಂಜುನಾಥ ಹಿರಳ್ಳಿ | | | |
| | ಶ್ರೀಮತಿ ಅನಿತಾ ಚನ್ನಯ್ಯ ಹೂವಿನಕೊಪ್ಪಲ | | | |
| | ಶ್ರೀ ರಾಘವೇಂದ್ರ ಗಿರಡ್ಡಿ | | | |
| | ಶ್ರೀಮತಿ ದಾಕ್ಷಾಯಣಿ ಬಾಡದ, | | | |
| 6) | **ಬೆರಳಚ್ಚುಗಾರರು** | 02 | 01 | 01 |
| | ಶ್ರೀ ಶ್ರೀಧರ. ಟಿ. ಚಿನ್ನಸ್ವಾಮಿ | | | |
| | ಶ್ರೀ ಎನ್. ಎ ಭಟ್ಟ, | | | |
| 7) | **ವಾಹನ ಚಾಲಕರು** | 01 | 01 | - |
| | ಶ್ರೀ ಗೌರೀಶ ಕುಡಾಳಕರ | | | |
| 8) | **ಗ್ರೂಫ್ ಡಿ ದರ್ಜೇ ನೌಕರರು** | 09 | 05 | 04 |
| | ಶ್ರೀಮತಿ ದೇವಕಿ | | | |
| | ಶ್ರೀ ಬಸವರಾಜ ಮಡಿವಾಳ | | | |
| | ಶ್ರೀ ಪಿ.ಎಲ್. ಫರ್ನಾಂಡೀಸ್ | | | |
| | ಶ್ರೀ ಶ್ರೀನಿವಾಸ. ಜಿ. ನಾಯ್ಕ, | | | |
| | ಶ್ರೀ ಆರ್. ಎನ್. ನೇತ್ರಕರ | | | |
| 9) | **ಬಿ) ಭೂಮಾಪಕರು** | 13 | 09 | 04 |
| | ಶ್ರೀ ಸಂದೀಪ ಪೈ | | | |
| | ಶ್ರೀ ನಾಗರಾಜ ನಾಯ್ಕ, ಕೆ. ಎಚ್ | | | |
| | ಶ್ರೀ ಪಿ. ವಿ. ಗಡಕರ, | | | |
| | ಶ್ರೀ ಎಚ್. ವಿ. ಗಣೇಶ | | | |
| | ಶ್ರೀ ಜಿ. ಟಿ. ಪವಾರ | | | |
| | ಶ್ರೀ ಕುಮಾರ ಎನ್. | | | |
| | ಶ್ರೀ ಪ್ರಕಾಶ ಕಿಣಿ | | | |
| | ಕು: ಸುನಯನಾ ಎಚ್. ಸಿ | | | |
| | ಕು: ನಂದೀತಾ ಟಿ. ಸಿ. | 01 | 01 | -- |
| | ಶ್ರೀ ಸತೀಶ ಡಿ. ವಿ. | | | |
| | ಶ್ರೀ ಸುನೀಲಕುಮಾರ್. ಉಪ್ಪಿನ | | | |
| | ಕು: ರಮ್ಯಾ ವಿ. | | | |
| | ಕು: ರಜನಿ ಕೆ. | 01 | 01 | -- |
| | **ಸಿ) ಪ್ರಥಮ ದರ್ಜೆ ಸಹಾಯಕರು** | 01 | -- | 01 |
| | ಶ್ರೀ ಜಿ. ಆರ್. ವಿಜಯಕುಮಾರ | | | |
| | **ಡಿ) ಡಿ ದರ್ಜೆ ಸಹಾಯಕರು** | 10 | 01 | 09 |
| | ಶ್ರೀ ನಾಗರಾಜ ಅವರ್ಸೇಕರ | | | |

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಕಾರ್ಯಕಾರಿ | ಖಾಲಿ |
|---|---|---|---|---|
| | **ಇ) ಬೆರಳಚ್ಚುಗಾರರು**<br>**ಎಫ್) ಬಾಂದ ಜವಾನರು**<br>ಶ್ರೀ ಎಂ. ಎಂ. ಕೊಂಡವಾಡೆ<br>**ಸಿಟಿ ಸರ್ವೆ ವಿಭಾಗ:**<br>**ಎ) ಭೂಮಾಪಕರು**<br>ಶ್ರೀ ಆರ್. ಎ. ಭಟ್<br>ಶ್ರೀ ಪಿ. ಎಲ್ ಫರ್ನಾಂಡೀಸ್, | | | |
| 10) | **ಉಪತಹಶೀಲ್ದಾರರು**<br>ಶ್ರೀ ಕೃಷ್ಣಾ ಕಾಮಕರ,<br>ಶ್ರೀ ರಮೇಶ ಬಿ. ಹೆಗಡೆ,<br>ಶ್ರೀ ಎಸ್. ಎಂ. ಹೆಗಡೆ, | 03 | 03 | -- |
| 11) | **ಕಂದಾಯ ನಿರೀಕ್ಷಕರು,**<br>ಶ್ರೀ ಶ್ರೀಕಾಂತ ಶೇಟ್, ಕಸಬಾ ಶಿರಸಿ<br>ಶ್ರೀ ಎಸ್. ಎನ್. ಶೇಟಿಯಾ, ಹುಲೇಕಲ್<br>ಶ್ರೀ ಬಿ. ಎನ್. ಶೆಟ್ಟಿ, ಸಂಪಖಂಡ | 04 | 03 | 01 |
| 12) | **ಗ್ರಾಮಲೆಕ್ಕಾಧಿಕಾರಿಗಳು**<br>1) ಕು: ಪ್ರೀತಿ ಟಿ. ನಾಯ್ಕ, ಗ್ರಾ.ಲೆಕ್ಕಾಧಿಕಾರಿ<br>2) ಕು: ಪ್ರಮೋದ ನಾಯ್ಕ, ಗ್ರಾ.ಲೆ<br>3) ಕು: ಪ್ರದೀಪ ನಾಯ್ಕ, ಗ್ರಾ.ಲೆ<br>4) ಶ್ರೀ ಕೊಟ್ರೇಶ ಯು. ಗ್ರಾ.ಲೆ<br>5) ಶ್ರೀ ಹರಿಶ್ಚಂದ್ರ ಚಮಗಾರ, ಗ್ರಾ.ಲೆ<br>6) ಶ್ರೀ ಜಿ. ಎಮ್. ಹೆಗಡೆ, ಗ್ರಾ.ಲೆ<br>7) ಶ್ರೀಮತಿ ಪುಷ್ಪಾ ಶೆಟ್ಟಿ, ಗ್ರಾ.ಲೆ<br>8) ಶ್ರೀಮತಿ ಎಂ. ಬಿ. ಫರ್ನಾಂಡೀಸ, ಗ್ರಾ.ಲೆ<br>9) ಶ್ರೀಮತಿ ಆಶಾ ಭಟ್ಟ, ಗ್ರಾ.ಲೆ<br>10) ಶ್ರೀ ಪಿ. ಎಸ್. ವೇಟೆಕರ, ಗ್ರಾ.ಲೆ<br>11) ಶ್ರೀ ಜಿ. ಆರ್. ಪಾವಸ್ಕರ, ಗ್ರಾ.ಲೆ<br>12) ಶ್ರೀಮತಿ ಶಾಂತಾ ಶೆಟ್ಟಿ, ಗ್ರಾ.ಲೆ<br>13) ಕು: ರಶ್ಮಿ ಡಿ. ನಾಯಕ, ಗ್ರಾ.ಲೆ<br>14) ಶ್ರೀ ಕಿರಣ ಕುರಿ, ಗ್ರಾ.ಲೆ<br>15) ಶ್ರೀ ಬಸವರಾಜ ಮಲ್ಲಮ್ಮನವರ, ಗ್ರಾ.ಲೆ<br>16) ಶ್ರೀ ಬಿ. ಆರ್. ಕಿಣಿ, ಗ್ರಾ.ಲೆ<br>17) ಶ್ರೀ ಆರ್. ಎಂ. ನಾಯ್ಕ, ಗ್ರಾ.ಲೆ<br>18) ಶ್ರೀ ಮಂಜುನಾಥ ಯು. ಗ್ರಾ.ಲೆ<br>19) ಶ್ರೀ ದೀಪಕ ಬಿ. ಮುಷ್ಟಿಗೇರಿ, ಗ್ರಾ.ಲೆ<br>20) ಶ್ರೀ ತಾಹೀರಾಬಾನು ಎ ಸತ್ತಾರ, ಗ್ರಾ.ಲೆ<br>21) ಶ್ರೀ ಎ. ವಿ. ದಾಸರ, ಗ್ರಾ.ಲೆ<br>22) ಶ್ರೀಮತಿ ಶಾಮಿನಾಬಾನು ಎ ಸತ್ತಾರ, ಗ್ರಾ.ಲೆ<br>23) ಶ್ರೀ ಕಿರಣ ನಾಯ್ಕ, ಗ್ರಾ.ಲೆ<br>24) ಶ್ರೀಮತಿ ಲತಾ ಶಾನಬಾಗ, ಗ್ರಾ.ಲೆ<br>25) ಶ್ರೀ ಭರಮನಾಯ್ಕ ಮ್ಯಾಗೇರಿ, ಗ್ರಾ.ಲೆ<br>26) ಶ್ರೀ ಎ. ಎ. ಮೀರ | 39 | 26 | 13 |

**(X)** ಕಚೇರಿಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನ ವಿವರಗಳು

| ಅ. ನಂ. | ಹೆಸರು ಮತ್ತು ಹುದ್ದೆ | ಒಟ್ಟೂ ಸಂಬಳ (ಮೂಲ ವೇತನ) (ರೂ. ಗಳಲ್ಲಿ) |
|---|---|---|
| 1) | ಶ್ರೀ ಬಸಪ್ಪ ಪೂಜಾರಿ<br>ತಹಶೀಲ್ದಾರ, ಶಿರಸಿ | 28800 |
| 2) | ಶ್ರೀ ವಿ. ಟಿ. ಹೆಗಡೆ, ಶಿರಸ್ತೇದಾರರು | 28800 |
| 3) | ಶ್ರೀ ವಿ.ಜಿ. ನಾಯ್ಕ, ಪ್ರ.ದ.ಸ | 26700 |
| 4) | ಶ್ರೀಮತಿ ಸೋನಾ ಕೋಠಾರಕರ, ಪ್ರ.ದ.ಸ | 15250 |
| 5) | ಶ್ರೀಮತಿ ಜಲಜಾಕ್ಷಿ ಶಿರಸ್ತೇದಾರರು | 26700 |
| 6) | ಶ್ರೀ ಶ್ರೀಮತಿ ಅನೀತಾ ಗಾಂಜೇಕರ, ಪ್ರದಸ | 15600 |
| 7) | ಶ್ರೀಮತಿ ರಾಧಾ ಬೋರಕರ, ಪ್ರದಸ | 18100 |
| 8) | ಶ್ರೀ ಬಿ. ನಾಗರಾಜಪ್ಪ, ಆಹಾರ ನಿರೀಕ್ಷಕರು | 26000 |
| 9) | ಶ್ರೀಮತಿ ವಿದ್ಯಾ ಹೆಗಡೆ, ದ್ವಿ.ದ.ಸ | 17200 |
| 10) | ಶ್ರೀಮತಿ ವನಿತಾ ರಘುನಾಥಿ, ದ್ವಿದಸ | 13000 |
| 11) | ಶ್ರೀಮತಿ ಮಂಜುಳಾ ಟಿ. ನಾಯ್ಕ, ದ್ವಿದಸ | 14900 |
| 12) | ಶ್ರೀ ಕೆ. ಎನ್. ಗೌಡಾ, ದ್ವಿದಸ | 16800 |
| 13) | ಶ್ರೀ ಕೆ. ಎಸ್. ನೇತ್ರೆಕರ, ದ್ವಿ.ದ.ಸ | 19000 |
| 14)`` | ಶ್ರೀ ರಾಘವೆಂದ್ರ ಗಿರಡ್ಡಿ, ದ್ವಿದಸ | 12250–00 |
| 15) | ಶ್ರೀ ಶ್ರೀಧರ. ಟಿ. ಚಿನ್ನಸ್ವಾಮಿ, ಬೆರಳಚ್ಚುಗಾರ | 149000 |
| 16) | ಗೌರೀಶ ಕುಡಾಳಕರ ವಾಹನ ಚಾಲಕರು | 14500 |
| 17) | ಶ್ರೀಮತಿ ದೇವಕಿ, ಡಿ. ದರ್ಜೆ ನೌಕರರು | 13900 |
| 18) | ಶ್ರೀ ಬಸವ ಮಡಿವಾಳ, ಡಿ ದರ್ಜೆ ನೌಕರರು | 13900 |
| 19) | ಶ್ರೀ ಪಿ. ಎಲ್ ಫರ್ನಾಂಡೀಸ, ಡಿ ದರ್ಜೆ ನೌಕರರು | 14900 |
| 20) | ಶ್ರೀ ಶ್ರೀನಿವಾಸ ಜಿ. ನಾಯ್ಕ, ಡಿ ದರ್ಜೆ ನೌಕರರು | 13900 |
| 21) | ಕು ಪ್ರೀತಿ ಟಿ. ನಾಯ್ಕ, ಗ್ರಾ.ಲೆ | 12500 |
| 22) | ಕು: ಪ್ರಮೋದ ನಾಯ್ಕ, ಗ್ರಾ.ಲೆ | 12500 |
| 23) | ಕು: ಪ್ರದೀಪ ಜಿ. ನಾಯ್ಕ, ಗ್ರಾ.ಲೆ | 12500–00 |
| 24) | ಶ್ರೀ ಕೊಟ್ರೇಶ. ಯು. ಗ್ರಾ.ಲೆ | 12500 |
| 25) | ಶ್ರೀ ಹರಿಶ್ಚಂದ್ರ ಚಮಗಾರ, ಗ್ರಾ.ಲೆ | 17200 |
| 26) | ಶ್ರೀ ಶ್ರೀಕಾಂತ ಶೇಟ್, ಕಂ. ನಿ. ಕಸಬಾ | 14550 |
| 27) | ಶ್ರೀ ಜಿ. ಎಮ್. ಹೆಗಡೆ, ಗ್ರಾ.ಲೆ | 13600 |
| 28) | ಶ್ರೀಮತಿ ಪುಷ್ಪಾ ಶೆಟ್ಟಿ, ಗ್ರಾ.ಲೆ | 18100 |
| 29) | ಶ್ರೀಮತಿ ಎಂ. ಬಿ. ಫರ್ನಾಂಡೀಸ್, ಗ್ರಾ.ಲೆ | 12000 |
| 30) | ಶ್ರೀಮತಿ ಆಶಾ ಭಟ್ಟ, ಗ್ರಾ.ಲೆ | 12500 |
| 31) | ಶ್ರೀ ಪಿ. ಎಸ್. ವೇಟೆಕರ, ಗ್ರಾ.ಲೆ | 18100 |
| 32) | ಶ್ರೀ ಜಿ. ಆರ್. ಪಾವಸ್ಕರ, ಗ್ರಾ.ಲೆ | 12500 |
| 33) | ಶ್ರೀಮತಿ ಶಾಂತಾ ಶೆಟ್ಟಿ, ಗ್ರಾ.ಲೆ. | 13600 |
| 34) | ಕು: ರಶ್ಮಿ. ಡಿ. ನಾಯಕ, ಗ್ರಾ.ಲೆ | 12000 |
| 35) | ಶ್ರೀ ಕೃಷ್ಣಾ ಕಾಮಕರ, ಉಪತಹಶೀಲ್ದಾರ, ಬನವಾಸಿ | 20000 |
| 36) | ಶ್ರೀ ಕಿರಣ ಕುರಿ, ಗ್ರಾ.ಲೆ | 13000 |

| ಅ. ನಂ. | ಹೆಸರು ಮತ್ತು ಹುದ್ದೆ | ಒಟ್ಟೂ ಸಂಬಳ (ಮೂಲ ವೇತನ) (ರೂ. ಗಳಲ್ಲಿ) |
|---|---|---|
| 37) | ಶ್ರೀ ಬಸವರಾಜ ಮಲ್ಲಮ್ಮನವರ, ಗ್ರಾ.ಲೆ | 12500.–00 |
| 38) | ಶ್ರೀ ಬಿ. ಆರ್. ಕಿಣಿ. ಗ್ರಾ.ಲೆ | 17200 |
| 39) | ಶ್ರೀ ಆರ್. ಎಂ. ನಾಯ್ಕ, ಗ್ರಾ.ಲೆ | 17650 |
| 40) | ಶ್ರೀ ರಮೇಶ ಬಿ. ಹೆಗಡೆ, ಉಪತಹಶೀಲ್ದಾರ, ಸಂಪಖಂಡ | 21000 |
| 41) | ಶ್ರೀ ಬಿ. ಎನ್. ಶೆಟ್ಟಿ, ಕಂ. ನಿ. ಸಂಪಖಂಡ | 18550 |
| 42) | ಶ್ರೀ ಮಂಜುನಾಥ ಯು. ಜೆ. ಗ್ರಾ.ಲೆ | 12500 |
| 43) | ಶ್ರೀ ದೀಪಕ ಬಿ. ಮುಷ್ಕಿಗೇರಿ, ಗ್ರಾ.ಲೆ | 13000 |
| 44) | ಕು: ಜಾಹೀರಾಬಾನು ಎ ಸತ್ತಾರ, ಗ್ರಾ.ಲೆ | 12500 |
| 45) | ಶ್ರೀ ಎಸ್. ಎಂ. ಹೆಗಡೆ, ಉ. ತ. ಹುಲೇಕಲ್ | 28800 |
| 46) | ಶ್ರೀ ಎಸ್. ಎನ್. ಶೇಟಿಯಾ, ಕಂ. ನಿ. ಹುಲೇಕಲ್ | 18550 |
| 47) | ಶ್ರೀ ಕಿರಣ ನಾಯ್ಕ, ಗ್ರಾ.ಲೆ | 12500 |
| 48) | ಶ್ರೀಮತಿ ಲತಾ ಶಾನಭಾಗ, ಗ್ರಾ.ಲೆ | 17650 |
| 49) | ಶ್ರೀ ಭರಮನಾಯ್ಕ ಮ್ಯಾಗೇರಿ, ಗ್ರಾ.ಲೆ | 12500 |

**ಭೂಮಿ ವಿಭಾಗ**

**2013–14 ರ ಪ್ರಗತಿ ವರದಿ**

| ವರ್ಷ | ಸ್ವೀಕ್ರಿಸಿದ ಅರ್ಜಿಗಳ ಸಂಖ್ಯೆ | ವಿಲೇವಾರಿ ಮಾಡಿದ ಅರ್ಜಿಗಳ ಸಂಖ್ಯೆ | ಬಾಕಿ ಅರ್ಜಿಗಳ ಸಂಖ್ಯೆ |
|---|---|---|---|
| 2013–14 | 7266 | 6849 | 417 |

**2014 ರ ಮಾಹಿತಿಹಕ್ಕು ಅಧಿನಿಯಮ 2005 ರಡಿಯಲ್ಲಿ ಸ್ವೀಕರಿಸಿದ ಅರ್ಜಿಗಳ ಯಾದಿ**

| ವರ್ಷ | ಸ್ವೀಕರಿಸಿದ ಒಟ್ಟೂ ಅರ್ಜಿಗಳು | ವಿಲೇವಾರಿ ಮಾಡಿದ ಅರ್ಜಿಗಳು | ಬಾಕಿ ಇರುವ ಅರ್ಜಿಗಳು |
|---|---|---|---|
| 2014–15 | 78 | 60 | 18 |

**ಚುನಾವಣೆ ವಿಭಾಗ**

**2014ರಲ್ಲಿ ಸ್ವೀಕರಿಸಿದ, ವಿಲೇವಾರಿ ಮಾಡಿದ ಅರ್ಜಿಗಳ ವಿವರ.**

| ವರ್ಷ | ಸ್ವೀಕರಿಸಿದ ಒಟ್ಟೂ ಅರ್ಜಿಗಳು | ವಿಲೇವಾರಿ ಮಾಡಿದ ಅರ್ಜಿಗಳು | ಬಾಕಿ ಇರುವ ಅರ್ಜಿಗಳು |
|---|---|---|---|
| 2014–15 | 67 | 67 | --- |

**ದಿನಾಂಕ: 01–12–2012 ರಿಂದ 25–09–2014ರವರೆಗೆ ಶಿರಸಿ ತಾಲೂಕಿನಲ್ಲಿ**

**ಅಟಲ್‌ಜೀ ಜನಸ್ನೇಹಿ ಕೇಂದ್ರದಲ್ಲಿ ಸ್ವೀಕೃತವಾದ ಅರ್ಜಿಗಳ ಮಾಹಿತಿ.**

| ತಾಲೂಕು | ಸ್ವೀಕರಿಸಿದ ಒಟ್ಟೂ ಅರ್ಜಿಗಳು | ವಿಲೇವಾರಿ ಮಾಡಿದ ಅರ್ಜಿಗಳು | ಬಾಕಿ ಇರುವ ಅರ್ಜಿಗಳು |
|---|---|---|---|
| ಶಿರಸಿ | 34826 | 33266 | 1560 |

**(XI) ಯೋಜನೆಗಳ ವಿವರಗಳು ವಾಸ್ತವಿಕ ವೆಚ್ಚಗಳು, ಮತ್ತು ಬಟವಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ :**

**1. ರಾಷ್ಟ್ರೀಯ ಸಾಮಾಜಿಕ ಕುಟುಂಬ ನೆರವು ಯೋಜನೆ**

ರಾಷ್ಟ್ರೀಯ ಸಾಮಾಜಿಕ ಕುಟುಂಬ ನೆರವು ಯೋಜನೆಯು ಕೇಂದ್ರ ಸರಕಾರದ ಯೋಜನೆಯಾಗಿದ್ದು ಇದು ದಿನಾಂಕ 15–08–1995 ರಿಂದ ಜ್ಯಾರಿಗೆ ಬಂದಿರುತ್ತದೆ. ಬಡತನ ರೇಖೆಗಿಂತ ಕೆಳಗಿರುವ ಬಡ ಕುಟುಂಬಗಳ ಯಜಮಾನ ಸಾವಿಗೀಡಾದಲ್ಲಿ ನಿರ್ಗತಿಕ ವಾರಸುದಾರರಿಗೆ ಸಹಾಯಧನವನ್ನು ಈ ಯೋಜನೆಯಡಿ ನೀಡಲಾಗುವುದು. ಸಾವಿಗೀಡಾದ ವ್ಯಕ್ತಿಯು ಕುಟುಂಬದ ಮುಖ್ಯಸ್ಥನಾಗಿದ್ದು, ವ್ಯಕ್ತಿಯು 18 ವರ್ಷಕ್ಕಿಂತ ಮೇಲ್ಪಟ್ಟು 64 ವರ್ಷದೊಳಗಿರಬೇಕು. ಈ ಯೋಜನೆಯ ಲಾಭ ಪಡೆಯುವ ಮುಖ್ಯಸ್ಥರ ವಾರ್ಷಿಕ ಆದಾಯ ರೂ. 11,500–00 ಕ್ಕಿಂತ ಹೆಚ್ಚಿಗೆ ಇರಬಾರದು. ಹಾಗೂ ಸಾಯುವ ಕಾಲಕ್ಕೆ 3 ವರ್ಷ ಮುಂಚಿತವಾಗಿ ಜಿಲ್ಲೆಯಲ್ಲಿ ವಾಸ್ತವ್ಯ ಮಾಡಿರಬೇಕು. ಸದ್ರಿ ಯೋಜನೆ ಸಹಾಯಧನ ಮಂಜೂರು ಮಾಡುವ ಅಧಿಕಾರವು ತಹಶೀಲ್ದಾರರಿಗೆ ಇರುತ್ತದೆ.

| ಕ್ರಮ ಸಂ. | ಅಧಿಕಾರಿಯ ಹೆಸರು, ಪದನಾಮ, ನೇಮಕಗೊಂಡ ಸ್ಥಳ. | ಒಪ್ಪಿಕೊಂಡಿರುವ ಜನ್ಮ ದಿನಾಂಕ |
|---|---|---|
| 30. | ಶ್ರೀ ಎಂ ಮೃತ್ಯುಂಜಯ,<br>ಸಹಾಯಕ ಸರ್ಕಾರಿ ಅಭಿಯೋಜಕರು ಅಧಿಕ<br>ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ ಚನ್ನರಾಯಪಟ್ಟಣ. | ದಿನಾಂಕ: 22–07–1974. (ಇಪತ್ತೆರಡನೇ ಜುಲೈ ಒಂದು ಸಾವಿರದ ಒಂಬೈನೂರ ಎಪ್ಪತ್ನಾಲ್ಕು) |
| 31. | ಶ್ರೀ. ಸಿ.ಬಿ.ಗಿರೀಶ್,<br>ಸಹಾಯಕ ಸರ್ಕಾರಿ ಅಭಿಯೋಜಕರು,<br>3ನೇ ಹೆಚ್ಚುವರಿ 1ನೇ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು. | ದಿನಾಂಕ: 04–05–1976, (ನಾಲ್ಕನೇ ಮೇ ಒಂದು ಸಾವಿರದ ಒಂಬೈನೂರ ಎಪ್ಪತ್ತಾರು.) |
| 32. | ಶ್ರೀಮತಿ. ವಿಜಯಲಕ್ಷ್ಮಿ ಎನ್.ಬಿ,<br>ಸಹಾಯಕ ಸರ್ಕಾರಿ ಅಭಿಯೋಜಕರು,<br>ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಾಮರಾಜನಗರ. | ದಿನಾಂಕ:22–05–1977, (ಇಪ್ಪತ್ತೆರಡನೇ ಮೇ ಒಂದು ಸಾವಿರದ ಒಂಬೈನೂರ ಎಪ್ಪತ್ತೇಳು.) |
| 33. | ಶ್ರೀಮತಿ ನಾಗರತ್ನಮ್ಮ ಬಿ.ಕೆ.,<br>ಸಹಾಯಕ ಸರ್ಕಾರಿ ಅಭಿಯೋಜಕರು,<br>ಸಿಜೆ (ಹಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಕಲೇಶಪುರ. | ದಿನಾಂಕ: 06–12–1980, (ಆರನೇ ಡಿಸೆಂಬರ್ ಒಂದು ಸಾವಿರದ ಒಂಬೈನೂರ ಎಂಬತ್ತು.) |
| 34. | ಶ್ರೀಮತಿ ಎಸ್.ನಜೀಮಾ ಬೇಗಂ,<br>ಸಹಾಯಕ ಸರ್ಕಾರಿ ಅಭಿಯೋಜಕರು<br>ಸಿಜೆ (ಹಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೊಳ್ಳೇಗಾಲ. | ದಿನಾಂಕ: 19–02–1974, (ಹತ್ತೊಂಬತ್ತನೇ ಫೆಬ್ರವರಿ ಒಂದು ಸಾವಿರದ ಒಂಬೈನೂರ ಎಪ್ಪತ್ನಾಲ್ಕು) |
| 35. | ಶ್ರೀ ಮಲ್ಲಿಕಾರ್ಜುನಗೌಡ ಬಸನಗೌಡ<br>ದೊಡ್ಡಗೌಡ್ರ, ಸಹಾಯಕ ಸರ್ಕಾರಿ ಅಭಿಯೋಜಕರು,<br>ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕಲಘಟಗಿ. | ದಿನಾಂಕ: 10–11–1978, (ಹತ್ತನೇ ನವೆಂಬರ್ ಒಂದು ಸಾವಿರದ ಒಂಬೈನೂರ ಎಪ್ಪತ್ತೆಂಟು) |

ಟಿಪ್ಪಣಿ ಮಾನ್ಯ ನಿರ್ದೇಶಕರಿಂದ ಅನುಮೋದಿತವಾಗಿರುತ್ತದೆ

ಬೆಂಗಳೂರು

ದಿನಾಂಕ : 31–10–2014

**ಟಿ.ಹೆಚ್.ಅನಂತಕೃಷ್ಣ**
ಕೇಂದ್ರ ಸಹಾಯಕರು
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ
ನಿರ್ದೇಶಕರ ಕಛೇರಿ ಬೆಂಗಳೂರು.

**P.R. 52**

**SC-100**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

**ಸಂ. ಜೆಆರ್‌ಬಿ/ಆರ್‌ಜಿಎನ್/ವಿಭಜನೆ/45/2014–15, ದಿನಾಂಕ: 05–01–2015**

**ವಿಷಯ :** ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಕೆ.ಹೆಚ್. ರಸ್ತೆ, ಬೆಂಗಳೂರು ಈ ಸಹಕಾರ ಸಂಘವನ್ನು ಗೃಹ ಹಾಗೂ ಪತ್ತಿನ ಸಹಕಾರ ಸಂಘಗಳಾಗಿ ಪ್ರತ್ಯೇಕ 2 ಸಹಕಾರ ಸಂಘಗಳಾಗಿ ವಿಭಜನೆ ಮಾಡಿ ನೋಂದಾಯಿಸುವ ಬಗ್ಗೆ.

**ಉಲ್ಲೇಖ :**
1. ಕಾರ್ಯದರ್ಶಿ, ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಕೆ.ಹೆಚ್. ರಸ್ತೆ, ಬೆಂಗಳೂರು ಇವರ ಪತ್ರ ದಿನಾಂಕ 12–11–2014 (ಈ ಕಛೇರಿಯಲ್ಲಿ ಸ್ವೀಕೃತಿ ದಿನಾಂಕ 12–12–2014).
2. ಈ ಕಛೇರಿಯ ಸಮಸಂಖ್ಯೆಯ ಪತ್ರ ದಿನಾಂಕ 17–12–2014.
3. ಸಂಘದ ಕಾರ್ಯದರ್ಶಿಯವರ ಪತ್ರ ದಿನಾಂಕ 29–12–2014.
4. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಓ/139/ಸಿಎಲ್ಎಂ/2010, ದಿನಾಂಕ: 17–02–2011.

**ಪ್ರಸ್ತಾವನೆ :–**

ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.15, 3ನೇ ಮಹಡಿ, 1ನೇ ಕ್ರಾಸ್, ಸಿ.ಕೆ.ಸಿ. ಗಾರ್ಡನ್, ಬಿ.ಐ.ಓ. ಹಾಸ್ಪಿಟಲ್ ಎದರು, ಕೆ.ಹೆಚ್. ರಸ್ತೆ (ಡಬಲ್ ರೋಡ್), ಬೆಂಗಳೂರು–560027 ಈ ಸಂಘವು ನೋಂದಣಿ ಸಂಖ್ಯೆ 210/ಡಿಆರ್/ ದಿನಾಂಕ 04–02–1954 ರಲ್ಲಿ ಮೈಸೂರು ಸಹಕಾರ ಸಂಘಗಳ ಕಾಯ್ದೆ 1948 ರ ಅವಕಾಶಗಳನ್ವಯ ನೋಂದಣಿಯಾಗಿ **ಪತ್ತಿನ ವ್ಯವಹಾರ ನಡೆಸುವ ಉದ್ದೇಶಗಳನ್ನು ಅಳವಡಿಸಿಕೊಂಡು ಕಾರ್ಯನಿರ್ವಹಿಸಿದ್ದು** ತದನಂತರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಉಪವಿಭಾಗ, ಬೆಂಗಳೂರು ಇವರು ನೀಡಿರುವ ಪ್ರಮಾಣ ಪತ್ರ ಸಂಖ್ಯೆ ಡಿ/ಆರ್‌ಜಿಎನ್/7675/64 ದಿನಾಂಕ 17/18–12–1964 ರಂತೆ ಸಂಘವು **ಗೃಹ ನಿರ್ಮಾಣ ಉದ್ದೇಶಗಳನ್ನು ಸಹ ಅಳವಡಿಸಿಕೊಂಡು**

**ಕಾರ್ಯನಿರ್ವಹಿಸುತ್ತಿರುವುದಾಗಿ** ತಿಳಿಸುತ್ತಾ ಸಂಘದ 54ನೇ ವಾರ್ಷಿಕ ಮಹಾಸಭೆಯಲ್ಲಿ ಕೈಗೊಂಡ ನಿರ್ಣಯದಂತೆ ಈ ಸಂಘವನ್ನು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಎಂದು ವಿಭಜನೆ ಮಾಡಲು ಸರ್ವಾನುಮತದಿಂದ ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ತತ್ಸಂಬಂಧದ ನಡವಳಿಗಳಿಗೆ ಅನುಮೋದನೆ ಕೋರಿ ಸದರಿ ಸಂಘದ 54ನೇ ಮಹಾಸಭೆಯ ನಡವಳಿಗಳ ಸಹಿತ ಅವಶ್ಯಕ ದಾಖಲಾತಿಗಳೊಂದಿಗೆ ಉಲ್ಲೇಖ (1) ಮತ್ತು (3) ರ ಪತ್ರದಲ್ಲಿ ಸಂಘದ ಕಾರ್ಯದರ್ಶಿಯು ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಕಾರ್ಯದರ್ಶಿಯು ಸಲ್ಲಿಸಿರುವ ಪ್ರಸ್ತಾವೆಯನ್ನು ಅವಲೋಕಿಸಲಾಗಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ ಈ ಸಂಘದ 54ನೇ ಮಹಾಸಭೆಯನ್ನು ದಿನಾಂಕ 14–09–2014 ರಂದು ಬೆಂಗಳೂರು ಸಿಟಿ ಚಾಮರಾಜಪೇಟೆ ಕೋಟೆ ಹೈಸ್ಕೂಲ್ ಮೈದಾನದ ಆವರಣದಲ್ಲಿ ನಡೆಸಿರುವುದನ್ನು ಸದರಿ **ಮಹಾಸಭೆಯ ವಿಷಯ ಸಂಖ್ಯೆ 13 – ಸಂಘವನ್ನು ಗೃಹ ನಿರ್ಮಾಣ ಸಹಕಾರ ಸಂಘ ಮತ್ತು ಪತ್ತಿನ ಸಹಕಾರ ಸಂಘವಾಗಿ ಬೇರ್ಪಡಿಸುವ ಬಗ್ಗೆ** ವಿಷಯವನ್ನು ಮಂಡಿಸಿರುವುದನ್ನು ಹಾಗೂ ಈ ವಿಷಯದ ಬಗ್ಗೆ ಮಹಾಸಭೆಯಲ್ಲಿ ವಿಸ್ತೃತ ಚರ್ಚೆಯಾಗಿ ಈ ಕೆಳಕಂಡಂತೆ ನಿರ್ಣಯವಾಗಿರುವುದನ್ನು ಪರಿಶೀಲಿಸಲಾಗಿದೆ.

**ವಿಷಯ ಸಂಖ್ಯೆ 13: ಸಂಘವನ್ನು ಗೃಹ ನಿರ್ಮಾಣ ಸಹಕಾರ ಸಂಘ ಮತ್ತು ಪತ್ತಿನ ಸಹಕಾರ ಸಂಘವಾಗಿ ಬೇರ್ಪಡಿಸುವ ಬಗ್ಗೆ.**

**ತೀರ್ಮಾನ :**

ಸಭಾಧ್ಯಕ್ಷತೆಯನ್ನು ವಹಿಸಿದ್ದ ಸಂಘದ ಅಧ್ಯಕ್ಷರು ಮಾತನಾಡುತ್ತಾ ಈ ಸಂಘವನ್ನು ವಿಭಜಿಸಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮತ್ತು ಪತ್ತಿನ ಸಹಕಾರ ಸಂಘ ನಿಯಮಿತ ಎಂದು ಪ್ರತ್ಯೇಕ ಸಂಘಗಳೆಂದು ನೋಂದಾಯಿಸುವುದು ಸದಸ್ಯರ ಹಿತದೃಷ್ಟಿಯಿಂದ ಅಗತ್ಯವಾಗಿರುತ್ತದೆ ಎಂದು ಸಂಘದ ಪ್ರಸ್ತುತ ಸದಸ್ಯತ್ವ ಆರ್ಥಿಕ ಪರಿಸ್ಥಿತಿ ಮತ್ತು ಇತರೆ ಎಲ್ಲಾ ಅಂಶಗಳ ಬಗ್ಗೆ ಈ ಕೆಳಕಂಡಂತೆ ಮಾಹಿತಿಯನ್ನು ಸಭೆಯ ಗಮನಕ್ಕೆ ಮಂಡಿಸಿರುತ್ತಾರೆ.

1. ಸಂಘದಲ್ಲಿನ ಹಾಲಿ ಇರುವ ಒಟ್ಟು ಸದಸ್ಯರ ಸಂಖ್ಯೆ 13745
   ಈ ಪೈಕಿ ಪತ್ತಿನ ಸೇವೆಯನ್ನು ಬಳಸಿಕೊಂಡಿರುವ ಸದಸ್ಯರು ಸುಮಾರು 11,000
   ಈ ಪೈಕಿ ಗೃಹ ನಿರ್ಮಾಣ ಸಂಬಂಧ ಸೇವೆಯನ್ನು ಬಳಸಿಕೊಂಡಿರುವ ಸದಸ್ಯರು 7,100
2. ಸಂಘವು ಹೊಂದಿರುವ ಒಟ್ಟು ಷೇರು ಬಂಡವಾಳ ರೂ. 2,43,78,300–00
3. ಸಂಘವು ಹೊಂದಿರುವ ಠೇವಣಿಗಳು ರೂ. 4,48,02,149–46
4. ಸಂಘವು ಗೃಹ ನಿರ್ಮಾಣ ಸಹಕಾರ ಸಂಘದ ಚಟುವಟಿಕೆಗಳನ್ನು ನಡೆಸಿ ಆರು ಬಡಾವಣೆಗಳನ್ನು ರಚಿಸಿ, ಸುಮಾರು 7095 ನಿವೇಶನಗಳನ್ನು ಹಂಚಿರುತ್ತದೆ. ಮತ್ತು ಗೃಹ ನಿರ್ಮಾಣ ಕಾರ್ಯ ಚಟುವಟಿಕೆಗಳ ಸಂಬಂಧ ಸಂಘವು ಹಲವಾರು ಮುಖ್ಯವಾದ ಸಮಸ್ಯೆಗಳನ್ನು ಎದುರಿಸುತ್ತಿರುವ ಬಗ್ಗೆ
5. ಸಂಘವು ಪತ್ತಿನ ಚಟುವಟಿಕೆಗಳಲ್ಲಿ ಎದುರಿಸುತ್ತಿರುವ ಮುಖ್ಯವಾದ ಸಮಸ್ಯೆಗಳ ಬಗ್ಗೆ. ಸಭೆಯ ಗಮನಕ್ಕೆ ಮಂಡಿಸಿರುತ್ತಾರೆ.

ಸಧ್ಯದ ಪರಿಸ್ಥಿತಿಯಲ್ಲಿ ಗೃಹ ನಿರ್ಮಾಣ ಸಹಕಾರ ಸಂಘದ ಚಟುವಟಿಕೆಗಳಿಗೆ ಪ್ರಸಕ್ತ ಆಡಳಿತ ಮಂಡಳಿ ತನ್ನ ಪೂರ್ಣ ಗಮನವನ್ನು ಹರಿಸಬೇಕಾಗಿರುವುದರಿಂದ ಮತ್ತು ಪತ್ತಿನ ಚಟುವಟಿಕೆಗಳ ವ್ಯವಸ್ಥಿತ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತಿಲ್ಲ. ಗೃಹ ನಿರ್ಮಾಣ ಸಂಘದ ಚಟುವಟಿಕೆಯಲ್ಲಿ ಭಾಗಿಯಾಗಿರುವ ಸದಸ್ಯರ ಪೈಕಿ ಈವರೆಗೂ 7095 ನಿವೇಶನ ಹಂಚಿದ್ದು, ಇನ್ನು ನಿವೇಶನ ಅಪೇಕ್ಷಿಸಿ 700 ಸದಸ್ಯರು ನಿವೇಶನದ ಠೇವಣಿ ಪಾವತಿಸಿ ನಿವೇಶನ ಹಂಚಿಕೆಯ ನಿರೀಕ್ಷೆಯಲ್ಲಿರುತ್ತಾರೆ.

ಇದಲ್ಲದೆ ಪತ್ತಿನ ಚಟುವಟಿಕೆಗಳಲ್ಲಿ ಸೇವೆ ಪಡೆಯುತ್ತಿರುವ ಸುಮಾರು 8000 ಜನ ಸದಸ್ಯರಿದ್ದು, ಎರಡು ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಸದಸ್ಯರು ಹಾಲಿ ಸುಮಾರು 2000 ಜನ ಇದ್ದಾರೆ. ಹೀಗಾಗಿ ಬಡಾವಣೆ ನಿರ್ಮಾಣ ಮತ್ತು ನಿವೇಶನ ಚಟುವಟಿಕೆಗಳಿಗೆ ತನ್ನ ಪೂರ್ಣ ಗಮನಹರಿಸಬೇಕಾಗಿರುವುದರಿಂದ ಪತ್ತಿನ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಗಣನೀಯವಾಗಿದ್ದರು, ಅವರಿಗೆ ವಿವಿಧ ರೀತಿಯ ಸಾಲ ಸೌಲಭ್ಯಗಳ ಸೇವೆಗಳನ್ನು ಒದಗಿಸಲು ಆಡಳಿತ ಮಂಡಳಿ ಪೂರ್ಣ ಗಮನವನ್ನು ಕೊಡಲಾಗುತ್ತಿಲ್ಲ. ಪರಿಣಾಮವಾಗಿ ಬಡಾವಣೆ ನಿರ್ಮಾಣ ಮತ್ತು ಚಟುವಟಿಕೆಗಳಿಗೆ ಪೂರ್ಣ ಗಮನ ನೀಡುವ ಸಲುವಾಗಿ ಗೃಹ ನಿರ್ಮಾಣ ಸಹಕಾರ ಸಂಘವೆಂದು, ಪತ್ತಿನ ಚಟುವಟಿಕೆಗಳಿಗೆ ಪೂರ್ಣ ಗಮನ ನೀಡುವ ಸಲುವಾಗಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಹಾಲಿ ಇರುವ ಸಂಘವನ್ನು ವಿಭಜಿಸಲು ಅಗತ್ಯ ಇರುತ್ತದೆ. ಆದ್ದರಿಂದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದನ್ನು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಎಂದು ವಿಭಜಿಸಲು ಪ್ರಸ್ತಾಪಿಸಲಾಗಿದೆ.

ಪ್ರಸ್ತಾಪಿತ ಎರಡು ಸಂಘಗಳು ಎಂದರೆ, ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇವುಗಳ ಉಪವಿಧಿಗಳನ್ನು ಈ ಮಹಾಸಭೆಯ ಅನುಮೋದನೆಗೆ ಇಡಲಾಗಿದೆ.

ಮೇಲಿನ ಪ್ರಸ್ತಾವೆಗಳನ್ನು ಸಭಾಧ್ಯಕ್ಷರು ವಿವರಿಸಿ ಕೆಳಕಂಡ ಅಂಶಗಳ ಬಗ್ಗೆ ಮಹಾಸಭೆಯ ಅನುಮೋದನೆಯನ್ನು ಕೋರಿದರು.

1. ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು, ಈ ಸಂಘವನ್ನು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಎಂದು ವಿಭಜಿಸತಕ್ಕದ್ದು.
2. ಗೃಹ ನಿರ್ಮಾಣ ಮತ್ತು ಪತ್ತಿನ ಚಟುವಟಿಕೆವಾರು ಸದಸ್ಯರುಗಳನ್ನು ಬೇರ್ಪಡಿಸುವುದು
3. ಉಪವಿಧಿಗಳನ್ನು ಗೃಹ ನಿರ್ಮಾಣ ಮತ್ತು ಪತ್ತಿನ ಸಂಘಗಳ ರಚನೆ ಮಾಡಲು ತಯಾರಿಸಿರುವ ಈ ಎರಡು ಸಂಘಗಳ ಉಪವಿಧಿಗಳನ್ನು ಅನುಮೋದಿಸುವುದು.
4. ಮೂಲ ಸಂಘವು ಈ ದಿನಾಂಕಕ್ಕೆ ಹೊಂದಿರುವ ವಿಷಯಗಳಲ್ಲಿ ವ್ಯಾಜ್ಯಗಳಿದ್ದಲ್ಲಿ ವಿಷಯವಾರು ಬೇರ್ಪಡಿಸುವುದು.

ಸಭಾಧ್ಯಕ್ಷರು ಮಂಡನೆಯನ್ನು ಮುಂದುವರಿಸುತ್ತಾ, ಹಾಲಿ ಇರುವ ಸಂಘದ ಆಸ್ತಿ ಹೊಣೆಗಳನ್ನು ಪ್ರಸ್ತಾಪಿತ ಎರಡು ಸಂಘಗಳಿಗೆ ಹಂಚಿಕೆ ಮಾಡುವ ವಿಚಾರದಲ್ಲಿ ಕೆಳಗಿನಂತೆ ತಿಳಿಸಿದರು.

| ಆಸ್ತಿಗಳ ವಿವರ | ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು | ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು | ಆಸ್ತಿಗಳನ್ನು ನೀಡಲು ಕಾರಣ |
|---|---|---|---|
| ನಂ. 15, 1ನೇ ಕ್ರಾಸ್, ಸಿ.ಕೆ.ಸಿ. ಗಾರ್ಡನ್, ಬಿ.ಐ.ಓ. ಆಸ್ಪತ್ರೆ ಎದುರು, ಕೆ.ಹೆಚ್. ರಸ್ತೆ, ಬೆಂಗಳೂರು ಈ ವಿಳಾಸದಲ್ಲಿರುವ ಕಟ್ಟಡ | – | ಈ ಆಸ್ತಿಯು ಈ ಸಂಘಕ್ಕೆ ಸೇರಿರುತ್ತದೆ. | ಪ್ರಸ್ತಾಪಿತ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಯಾವುದೇ ಸಂಪನ್ಮೂಲವಿಲ್ಲದ ಕಾರಣ ಬಡಾವಣೆ ನಿರ್ಮಾಣ ನಿವೇಶನ ಹಂಚಿಕೆ ಪ್ರಕ್ರಿಯೆ ಲಾಭದಾಯಕತೆಯಿಂದ ಕೂಡಿರದೆ, ಸೇವಾ ಮನೋಭಾವ ಹೊಂದಿರುವುದು ಮತ್ತು ಸಂಘವು ಬಡಾವಣೆಗಳ ಸಂಬಂಧ ಭೂ ಮಾಲೀಕರು ಜಮೀನುಗಳ ಸಂಬಂಧ, ಸದಸ್ಯರು ನಿವೇಶನಗಳ ಸಂಬಂಧ, ಭೂ ಅಭಿವೃದ್ಧಿದಾರರು ಜಮೀನು ಅಭಿವೃದ್ಧಿ ಮತ್ತು ಕಾಮಗಾರಿ ಸಂಬಂಧ ವಿವಿಧ ನ್ಯಾಯಾಲಯಗಳಲ್ಲಿ ಸುಮಾರು 250 ಕ್ಕೂ ಹೆಚ್ಚು ದಾವೆಗಳನ್ನು ಹೂಡಿರುವ ಸಂಬಂಧ ಇದರ ವೆಚ್ಚಗಳನ್ನು ಭರಿಸಲು ಸಂಪನ್ಮೂಲವಿಲ್ಲದ ಕಾರಣ ಈ ಕಟ್ಟಡಗಳಿಂದ ಬರುವ ಬಾಡಿಗೆಯಲ್ಲಿ ಈ ವೆಚ್ಚಗಳನ್ನು ಭರಿಸಲು ಈ ಪ್ರಸ್ತಾವ ಮಾಡಲಾಗಿದೆ. |
| ನಂ. 35, 4ನೇ ಮುಖ್ಯರಸ್ತೆ, ಎ.ಇ.ಸಿ.ಎಸ್. ಬಡಾವಣೆ, ಸಂಜಯನಗರ, ಬೆಂಗಳೂರು–560094 ಈ ವಿಳಾಸದಲ್ಲಿರುವ ಸಮುದಾಯ ಭವನ | – | ಈ ಆಸ್ತಿಯು ಈ ಸಂಘಕ್ಕೆ ಸೇರಿರುತ್ತದೆ. | |
| ಸಂಘವು ಸದಸ್ಯರಿಗೆ ನೀಡಿರುವ ಸಾಲ ಎಲ್ಲಾ ಮೊತ್ತ | ಈ ಸಂಘಕ್ಕೆ ಸೇರಿರುತ್ತದೆ | – | ಸಂಘವು ಪತ್ತಿನ ಚಟುವಟಿಕೆಗಳಲ್ಲಿ ಸದಸ್ಯರಿಗೆ ವೇತನಾಧಾರಿತ ಸಾಲಗಳನ್ನು ನೀಡಿದ್ದು, ಈ ಮೊತ್ತವು ಪತ್ತಿನ ಸಹಕಾರ ಸಂಘಕ್ಕೆ ಸೇರಿರುವ ಬಗ್ಗೆ ಈ ಪ್ರಸ್ತಾವ ಮಾಡಲಾಗಿದೆ. |
| ಸಂಘವು ಸಂಗ್ರಹಿಸಿರುವ ಠೇವಣಿ ರೂ.250 ಮೊತ್ತದ ನಿಶ್ಚಿತ ಠೇವಣಿ | ಈ ಸಂಘಕ್ಕೆ ಸೇರಿರುತ್ತದೆ | – | ಸಂಘವು ಪತ್ತಿನ ಚಟುವಟಿಕೆಗಳಲ್ಲಿ ಸದಸ್ಯರಿಗೆ ಅನುಕೂಲವಾಗುವ ದೃಷ್ಟಿಯಿಂದ ನಿಶ್ಚಿತ ಠೇವಣಿಗಳನ್ನು ಪಡೆದು ದುಡಿಯುವ ಬಂಡವಾಳದಲ್ಲಿ ತೊಡಗಿಸಿಕೊಂಡಿರುವುದರಿಂದ ಈ ಮೊತ್ತವು ಪತ್ತಿನ ಸಹಕಾರ ಸಂಘಕ್ಕೆ ಸೇರಿರುವ ಬಗ್ಗೆ ಈ ಪ್ರಸ್ತಾವ ಮಾಡಲಾಗಿದೆ. |
| ಸಂಘವು ಸಂಗ್ರಹಿಸಿರುವ ನಿವೇಶನ ಠೇವಣಿ ಮೊತ್ತವು | – | ಈ ಮೊತ್ತವು ಈ ಸಂಘಕ್ಕೆ ಸೇರಿರುತ್ತದೆ. | ನಿವೇಶನ ಅಪೇಕ್ಷಿಸಿ, ಸದಸ್ಯರು ಪಾವತಿ ಮಾಡಿರುವ ನಿವೇಶನ ಠೇವಣಿ ಮೊತ್ತವು ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಸೇರಿರುವ ಬಗ್ಗೆ ಈ ಪ್ರಸ್ತಾವ ಮಾಡಲಾಗಿದೆ. |
| <u>ಹೊಣೆಗಾರಿಕೆಗಳು</u><br>ಸಂಘವು ರೂ. ಷೇರು ಬಂಡವಾಳ 24378300/–ಹೊಂದಿರುತ್ತದೆ. | – | – | ಈ ಮೊತ್ತವನ್ನು ಸದಸ್ಯತ್ವ ಆಧಾರದ ಮೇಲೆ ಮತ್ತು ದಿನಾಂಕ:31–3–2014ಕ್ಕೆ ಆದ ಆಡಿಟ್ ವರದಿ ಮತ್ತು ಪರಿಷ್ಕೃತ ಲೆಕ್ಕಪತ್ರಗಳ ಅನುಮೋದನೆಗೆ ಒಳಪಟ್ಟು ಎರಡು ಸಂಘಗಳು ವಿಂಗಡಿಸಿಕೊಳ್ಳುವ ಬಗ್ಗೆ ಪ್ರಸ್ತಾಪಿಸಿದೆ. |
| <u>ರೆಕರಿಂಗ್ ಡಿಪಾಸಿಟ್</u> | ಈ ಸಂಘಕ್ಕೆ ಸೇರಿರುತ್ತದೆ | – | ಈ ಮೊತ್ತವು ಪತ್ತಿನ ಚಟುವಟಿಕೆ ಹೊಂದಿರುವುದರಿಂದ ಪತ್ತಿನ ಸಹಕಾರ ಸಂಘಕ್ಕೆ ಸೇರಿರುತ್ತದೆ ಎಂದು ಪ್ರಸ್ತಾಪಿಸಲಾಗಿದೆ. |

| | | | |
|---|---|---|---|
| <u>ರಿಸರ್ವ್ ಫಂಡ್</u><br>ರೂ. 1,28,00,000–00 | ಶೇ. 50 ರಷ್ಟು | ಶೇ. 50 ರಷ್ಟು | ಸಂಘವು ಹೊಂದಿರುವ ಒಟ್ಟು ರಿಸರ್ವ್ ಫಂಡ್‌ನಲ್ಲಿ ಕರ್ನಾಟಕ ರಾಜ್ಯ ಸಹಕಾರ ವಸತಿ ಮಹಾಮಂಡಳದಲ್ಲಿ ಹೊಂದಿರುವ ಪೂರ್ಣ ಮೊತ್ತವು ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಸೇರುತ್ತದೆ ಮತ್ತು ಅಪೆಕ್ಸ್ ಬ್ಯಾಂಕಿನಲ್ಲಿ ಹೊಂದಿರುವ ಮೊತ್ತದ ಪೈಕಿ ರೂ. 28,00,000–00 ಗಳನ್ನು ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ವರ್ಗಾಯಿಸುವುದು. ಇನ್ನುಳಿದ ಪೂರ್ಣ ಮೊತ್ತ ಪತ್ತಿನ ಸಹಕಾರ ಸಂಘಕ್ಕೆ ಸೇರುತ್ತದೆ. |

ಸಂಘವು ಒಟ್ಟು 14 ಸಿಬ್ಬಂದಿಗಳನ್ನು ಹೊಂದಿದ್ದು, ಮತ್ತು ಉದ್ದೇಶವಾರು ಸಂಘದ ಚಟುವಟಿಕೆಗಳನ್ನು ಬೇರೆ ಬೇರೆ ಕಟ್ಟಡದಲ್ಲಿ ಪ್ರತ್ಯೇಕ ದಾಖಲೆಗಳೊಂದಿಗೆ ನಿರ್ವಹಿಸಲಾಗುತ್ತಿದೆ. ಅದರನ್ವಯ ಪತ್ತಿನ ಚಟುವಟಿಕೆ ನಡೆಸುತ್ತಿರುವ ಸಂಘದಲ್ಲಿ 10 ಜನ ಸಿಬ್ಬಂದಿ ಮತ್ತು ಗೃಹ ನಿರ್ಮಾಣ ಚಟುವಟಿಕೆ ನಡೆಸುತ್ತಿರುವ ಸಂಘದಲ್ಲಿ 04 ಜನ ಸಿಬ್ಬಂದಿ ಕಾರ್ಯನಿರ್ವಹಿಸುತ್ತಿದ್ದು, ಇವರೆಲ್ಲರ ಸಿಬ್ಬಂದಿ ಠೇವಣಿಯು ಇಂಡಿಯನ್ ಬ್ಯಾಂಕ್, ಕೆ.ಆರ್. ರಸ್ತೆ, ಬೆಂಗಳೂರು ಇಲ್ಲಿ ಠೇವಣಿಸಿದ್ದು ಈ ಮೊತ್ತದಲ್ಲಿ ಪತ್ತಿನ ಸಂಘದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಸಂಬಂಧಪಟ್ಟ ಮೊತ್ತವನ್ನು ಪತ್ತಿನ ಸಂಘಕ್ಕೆ ವರ್ಗಾಯಿಸಲು ಗೃಹ ನಿರ್ಮಾಣ ಸಹಕಾರ ಸಂಘವು ಜವಾಬ್ದಾರಿ ಹೊಂದಿರುತ್ತದೆ.

ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಹೆಚ್.ಎ.ಎಲ್. ಶಾಖೆ ಖಾತೆಯ ವ್ಯವಹಾರವು ಮತ್ತು ಅಪೆಕ್ಸ್ ಬ್ಯಾಂಕಿನ ಕೆ.ಆರ್.ಪುರಂ ಶಾಖೆಯಲ್ಲಿರುವ ಖಾತೆಯ ನಿಶ್ಚಿತ ಠೇವಣಿಯು ಸಂಪೂರ್ಣವಾಗಿ ಪತ್ತಿನ ಸಹಕಾರ ಸಂಘಕ್ಕೆ ಸೇರಿರುತ್ತದೆ. ಉಳಿದಂತೆ ಸಂಘವು ಗೃಹ ನಿರ್ಮಾಣ ಚಟುವಟಿಕೆಗೆ ಸಂಬಂಧಪಟ್ಟಂತೆ ನಿರ್ವಹಿಸಿರುವ ಕೆನರಾ ಬ್ಯಾಂಕ್ ಶಾಂತಿನಗರ ಶಾಖೆ ಮತ್ತು ಸಂಜಯ ನಗರ ಶಾಖೆ ಹಾಗೂ ಬಿಬಿಆರ್ & ಆರ್‌ಡಿಸಿಸಿ ಬ್ಯಾಂಕ್ ಎಲ್ಲಾ ಬ್ಯಾಂಕುಗಳ ಖಾತೆಗಳು ಮತ್ತು ಅದರ ವ್ಯವಹಾರ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಸೇರಿರುತ್ತದೆ.

ಈ ಸಂಬಂಧದಲ್ಲಿ ದಿನಾಂಕ: 31–03–2014 ಕ್ಕೆ ಅಂತ್ಯವಾದ ಅವಧಿಗೆ ಪ್ರಸ್ತಾಪಿತ ಎರಡು ಸಹಕಾರ ಸಂಘಗಳ ಆಸ್ತಿ ಹೊಣೆಗಾರಿಕೆ ಪಟ್ಟಿಗಳನ್ನು ತಾತ್ಕಾಲಿಕವಾಗಿ ತಯಾರಿಸಿ, ಮಂಡಿಸಲಾಗಿದೆ. ಸದರಿ ಆಸ್ತಿ ಹೊಣೆಗಾರಿಕೆ ಪಟ್ಟಿಗೆ ಅನುಮೋದನೆ ಕೋರಿದೆ.

ಸದರಿ ಆಸ್ತಿ ಹೊಣೆಗಾರಿಕೆ ಪಟ್ಟಿಗಳು ನೋಂದಣಿಯಾಗಿ ಅಸ್ತಿತ್ವಕ್ಕೆ ಬಂದ ದಿನಾಂಕಕ್ಕೆ ಇದ್ದಂತೆ ಪರಿಷ್ಕರಣೆಗೆ ಒಳಪಟ್ಟಿರುತ್ತದೆ. ಹಾಗೆ ಪರಿಷ್ಕರಿಸಲು ಆಡಳಿತ ಮಂಡಳಿಗೆ ಅಧಿಕಾರ ಕೊಡುವಂತೆಯು ಮಹಾಸಭೆಯನ್ನು ಪ್ರಸ್ತಾಪಿಸಲಾಗಿದೆ.

ಗೃಹ ನಿರ್ಮಾಣ ಸಹಕಾರ ಸಂಘದ ನಿವೇಶನ ಠೇವಣಿ ಸಂಗ್ರಹಿಸಿ ಅದನ್ನು ಪತ್ತಿನ ಸಂಘದ ವ್ಯವಹಾರಗಳಿಗೆ ಕೊಟ್ಟಿದ್ದಲ್ಲಿ ಅದನ್ನು ವಾಪಸ್ಸು ಪಡೆಯಲು ಪ್ರಸ್ತಾಪಿಸಲಾಗಿದೆ..

ಕೂಡಲುಸಿಂಗಸಂದ್ರ ಬಡಾವಣೆಯಲ್ಲಿನ ನಿವೇಶನ ಹಂಚಿಕೆಯಾಗದ ಸದಸ್ಯರಿಗೆ ನಿವೇಶನ ಠೇವಣಿ ವಾಪಸ್ಸು ಪಾವತಿಸಬೇಕಾದ ನಿವೇಶನ ಮುಂಗಡವನ್ನು ಗೃಹ ನಿರ್ಮಾಣ ಸಹಕಾರ ಸಂಘವು ಪಾವತಿಸುವ ಜವಾಬ್ದಾರಿ ಹೊಂದಿರುತ್ತದೆ ಎಂದು ಪ್ರಸ್ತಾಪಿಸಿದೆ.

ಕೂಡಲುಸಿಂಗಸಂದ್ರ ಬಡಾವಣೆಯ ಸಂಬಂಧ ಪ್ರಶಾಂತ್ ಬಿಲ್ಡರ್ಸ್ ಮತ್ತು ಸಂಘಕ್ಕೆ ನ್ಯಾಯಾಲಯದಲ್ಲಿ ದಾವೆ ಇದ್ದು, ನ್ಯಾಯಾಲಯವು ಇದರ ಕ್ಲೇಮುಗಳಿಗೆ ಹಣಪಾವತಿಸುವ ವಿಚಾರ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಸಂಬಂಧಿಸಿರುತ್ತದೆ. ಮತ್ತು ಸಂಘದ ಬಡಾವಣೆ ಜಮೀನುಗಳ ಸಂಬಂಧ, ನಿವೇಶನಗಳ ಸಂಬಂಧ ಮತ್ತು ಭೂ ಅಭಿವೃದ್ಧಿದಾರರ ಸಂಬಂಧ ಹಾಗೂ ಜಮೀನುಗಳಲ್ಲಿ ಕಟ್ಟಡಗಳು ಮತ್ತು ಬಡಾವಣೆಗೆ ಸಂಬಂಧಪಟ್ಟ ಪೂರಕವಾದ ಯಾವುದೇ ನ್ಯಾಯಾಲಯಗಳಲ್ಲಿ ವ್ಯಾಜ್ಯಗಳಿದ್ದಲ್ಲಿ ಈ ವ್ಯಾಜ್ಯಗಳ ಹೊಣೆಗಾರಿಕೆ ಗೃಹ ನಿರ್ಮಾಣ ಸಂಘಕ್ಕೆ ಇರುತ್ತದೆ. ಇವುಗಳನ್ನು ಹೊರತುಪಡಿಸಿ, ಇತರೆ ಯಾವುದೇ ವ್ಯಾಜ್ಯಗಳಿದ್ದಲ್ಲಿ ಪತ್ತಿನ ಸಂಘಕ್ಕೆ ಸೇರಿರುತ್ತದೆ ಎಂದು ಪ್ರಸ್ತಾಪಿಸಲಾಗಿದೆ.

ಶ್ರೀ ಅನಂತ ಪದ್ಮನಾಭ, ಸದಸ್ಯರು ಇವರು ಸಭಾಧ್ಯಕ್ಷರ ಮೇಲೆ ಸಂಘಗಳ ವಿಭಜನೆ ಬಗ್ಗೆ ಮತ್ತು ಆಸ್ತಿ ಹೊಣೆಗಾರಿಕೆಗಳ ಬಗ್ಗೆ ಮಂಡಿಸಿರುವುದನ್ನು ಅನುಮೋದಿಸುತ್ತಾ, ಹಾಲಿ ಇರುವ ಸಂಘವನ್ನು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಎಂದು ವಿಭಜಿಸುವುದನ್ನು ಸ್ವಾಗತಿಸಿದರು. ಮುಂದುವರಿದು, ಹೀಗೆ ಎರಡು ಹೊಸ ಸಂಘಗಳನ್ನು ನೋಂದಣಿ ಮಾಡಿರುವುದರಿಂದ ಆಯಾಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಸದಸ್ಯರಿಗೆ ಸಮರ್ಪಕ ಸೇವೆ ಒದಗಿಸಲು ಸಾಧ್ಯವಾಗುತ್ತದೆ ಎಂದು ತಿಳಿಸುತ್ತಾ, ಇಂತಹ ಪ್ರಸ್ತಾವವನ್ನು ತಂದಿರುವುದಕ್ಕಾಗಿ ಆಡಳಿತ ಮಂಡಳಿ ಸದಸ್ಯರಿಗೆ ಧನ್ಯವಾದಗಳನ್ನು ಸಲ್ಲಿಸಿ, ಮಹಾಸಭೆ ಈ ನಿರ್ಣಯ ಅಂಗೀಕರಿಸಬೇಕೆಂದು ವಿನಂತಿಸಿದರು. ಮತ್ತೊಬ್ಬ ಸದಸ್ಯರಾದ ಶ್ರೀ ಅಶ್ವಥನಾರಾಯಣ ಸಹ ಮಾತನಾಡಿ ಸಭಾಧ್ಯಕ್ಷರು ತಂದಿರುವ ಪ್ರಸ್ತಾವವನ್ನು ಸ್ವಾಗತಿಸಿ, ಮಹಾಸಭೆಯು ತತ್ಸಂಬಂಧ ನಿರ್ಣಯ ಅಂಗೀಕರಿಸಬೇಕೆಂದು ವಿನಂತಿಸಿದರು.

ಸುದೀರ್ಘ ಚರ್ಚೆಯ ನಂತರ ಸಂಘದ ವಿಭಜನೆ ಸಂಬಂಧ ಅಧ್ಯಕ್ಷರು ಪ್ರಸ್ತಾಪಿಸಿರುವ ವಿಷಯ ಸಂಘದ ವಿಭಜನೆಯಿಂದಾಗಿ ಹೊಸದಾಗಿ ರಚಿಸಬೇಕಾಗಿರುವ ಸಂಘಗಳಾದ 1) ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಮತ್ತು 2)ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇವುಗಳನ್ನು ನೋಂದಣಿ ಮಾಡಿಸುವ ಬಗ್ಗೆ ಮತ್ತು ಉದ್ದೇಶಿತ ಧ್ಯೇಯೋದ್ದೇಶಗಳನ್ನು ಹಾಗೂ ಉಪವಿಧಿಗಳನ್ನು ಅಳವಡಿಸಿಕೊಳ್ಳುವ ಬಗ್ಗೆ ಮುಖ್ಯವಾಗಿ ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಭಜಿಸುವ ಪ್ರಸ್ತಾವೆಯನ್ನು ಹಾಗೂ ಆಸ್ತಿ ಹಾಗೂ ಜವಾಬ್ದಾರಿಗಳನ್ನು ಹಂಚಿಕೆ ಮಾಡಿಕೊಳ್ಳುವ ಬಗ್ಗೆ ಸಭೆಯು ಕೂಲಕಂಕುಷವಾಗಿ ಪರಿಶೀಲಿಸಿ ಯಥಾ ಪ್ರಸ್ತಾವನೆಯನ್ನು ಸಂಘದ ಸದಸ್ಯರ ಹಿತಕ್ಕೆ ಪೂರಕವಾಗಿ ಕಾರ್ಯನಿರ್ವಹಿಸಲು ಸಹಕಾರಿಯಾಗುವುದನ್ನು ಮನಗಂಡು ಸದಸ್ಯರಾದ ಶ್ರೀ ಸಿದ್ದರಾಜು ರವರು ಅನುಮೋದಿಸಬಹುದೆಂದು ವ್ಯಕ್ತಿಪಡಿಸಿದ ಅಭಿಪ್ರಾಯವನ್ನು ಸರ್ವರು ಸರ್ವಾನುಮತದಿಂದ ಪ್ರಸ್ತಾವನೆಯನ್ನು ಅಂಗೀಕರಿಸಿ ತೀರ್ಮಾನಿಸಲಾಯಿತು.

ಸಂಘವು ಉದ್ದೇಶ/ಚಟುವಟಿಕೆವಾರು ನಿರ್ವಹಿಸಿರುವ ದಾಖಲೆಗಳನ್ನು ಆಯಾ ಸಂಘದ ಕಛೇರಿಗಳಲ್ಲಿ ಉಳಿಸಿಕೊಳ್ಳತಕ್ಕದ್ದು. ಸಂಘದ ಎಲ್ಲಾ ಮೂಲ ಠರಾವು ಪುಸ್ತಕಗಳು ಹಾಗೂ ಕಾನೂನುಬದ್ಧ ವಿಚಾರಣಾ ವರದಿ, ಪರಿವೀಕ್ಷಣಾ ವರದಿ, ಆಡಿಟ್ ವರದಿ ಹಾಗೂ ಆಡಳಿತಾತ್ಮಕ ವರದಿಗಳ ಮೂಲ

ದಾಖಲೆಗಳು ಗೃಹ ನಿರ್ಮಾಣ ಸಂಘದ ವಶದಲ್ಲಿರತಕ್ಕದ್ದು. ಪತ್ತಿನ ಸಂಘಕ್ಕೆ ಅವಶ್ಯವಿದ್ದಲ್ಲಿ ದೃಢೀಕೃತ ಪ್ರತಿಯನ್ನು ಪಡೆಯಬಹುದಾಗಿದೆ ಎಂದು ನಿರ್ಣಯಿಸಲಾಯಿತು.

ಮಹಾಸಭೆಯು ಮೇಲಿನಂತೆ ಸಭಾ ಗಮನಕ್ಕೆ ಪ್ರಸ್ತಾಪಿಸಿರುವ ಎಲ್ಲಾ ಪ್ರಸ್ತಾವಗಳನ್ನು ಒಳಗೊಂಡಂತೆ ಈಗಾಗಲೇ ಮೇಲೆ ನಿರ್ಧರಿಸಿರುವಂತೆ ಅಂಶಗಳ ಬಗ್ಗೆ ಸರ್ವಾನುಮತದ ನಿರ್ಣಯವನ್ನು ಅಂಗೀಕರಿಸುವಂತೆ ಸಕ್ಷಮ ಪ್ರಾಧಿಕಾರವನ್ನು ವಿನಂತಿಸಲು ನಿರ್ಧರಿಸಿರುತ್ತದೆ.

ವಿಭಜನೆ ನಂತರ ಅಸ್ತಿತ್ವಕ್ಕೆ ಬರುವ ಸಂಘಗಳ ಆಡಳಿತ ಮಂಡಲಿಗಳು ಹಿಂದಿನ ವಿಷಯಗಳ ಬಗ್ಗೆ ಯಾವುದೇ ಗೊಂದಲ ಅಥವಾ ಪರಿಹಾರ ಬೇಕಿದ್ದಲ್ಲಿ ಮುಕ್ತ ಮಾತುಕತೆ ಹಾಗೂ ಪರಸ್ಪರ ಚರ್ಚೆಗಳ ಮೂಲಕ ಬಗೆಹರಿಸಿ ನಿರ್ಣಯಗಳನ್ನು ಮಾಡಿಕೊಳ್ಳುವ ಬಗ್ಗೆ ಕ್ರಮವಹಿಸಬಹುದಾಗಿದೆ ಎಂದು ಸಭೆಯ ಅಧ್ಯಕ್ಷರು ಸಭೆಯ ಅನುಮೋದನೆ ಕೋರಿದ್ದನ್ನು ಸಭೆಯು ಯಾವುದೇ ಚರ್ಚೆ ಇಲ್ಲದೇ ಸರ್ವಾನುತದಿಂದ ಒಪ್ಪಿಗೆ ನೀಡಿರುತ್ತದೆ ಎಂದು ಸರ್ವ ಸದಸ್ಯರ ಒಪ್ಪಿಗೆ ಮೇರೆಗೆ ದಾಖಲಿಸಲಾಯಿತು.

ಮಹಾಸಭೆಯ ವಿಷಯ ಸಂಖ್ಯೆ 13 ರಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಮತ್ತು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ, ಬೆಂಗಳೂರು ಆಗಿ ಎರಡು ಪ್ರತ್ಯೇಕ ಸಂಘಗಳಾಗಿ ಕಾರ್ಯನಿರ್ವಹಿಸುವಂತೆ ಸದರಿ ಸಂಘದ 54ನೇ ಮಹಾಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನ ಕೈಗೊಳ್ಳಲಾಗಿದೆ. ಇದೇ ತೀರ್ಮಾನದಲ್ಲಿ ಕಲಂ 14 ರ ಅವಕಾಶದಂತೆ ಪ್ರಸ್ತಾಪಿತ ಸಂಘಗಳಿಗೆ ಆಸ್ತಿ ಮತ್ತು ಜವಾಬ್ದಾರಿಗಳನ್ನು ಹಂಚಿಕೆ ಮಾಡುವ ಸಲುವಾಗಿಯೂ ಸಹ ವಾರ್ಷಿಕ ಮಹಾಸಭೆಯಲ್ಲಿ ತೀರ್ಮಾನವಾಗಿರುತ್ತದೆ.

ದಿನಾಂಕ 14-09-2013 ರಂದು ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಈ ಸಂಘದ 54ನೇ ಮಹಾಸಭೆಯಲ್ಲಿ ಸಂಘವನ್ನು ವಿಭಜನೆ ಮಾಡುವ ಸಂಬಂಧ ವಿಷಯ 13 ರಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡಿ **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ಮತ್ತು **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ಗಳೆಂದು 02 ಪ್ರತ್ಯೇಕ ಸಂಘಗಳನ್ನು ರಚಿಸಲು ವಾರ್ಷಿಕ ಮಹಾಸಭೆಯು ಸರ್ವಾನುಮತದಿಂದ ತೀರ್ಮಾನ ಕೈಗೊಂಡಿದ್ದು, ಈ ತೀರ್ಮಾನವು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳಿಗೆ ತಿದ್ದುಪಡಿಯಾಗಿ ಸದರಿ ತಿದ್ದುಪಡಿಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುವ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 58 ಶಾಸನ 2014, ಬೆಂಗಳೂರು, ದಿನಾಂಕ 06-09-2014 ರಲ್ಲಿ ಕಲಂ 27 (ii) for sub-section (4), the following shall be substituted, namely:- "(4) The quorum for a general meeting shall be as specified in the bye-laws but not less than one thousand members or ten percent of the members eligible to vote whichever is less." ಈ ಅವಕಾಶಗಳಿಗೆ ಒಳಪಟ್ಟು ಸದರಿ ಸಂಘದ ಒಟ್ಟು ಸದಸ್ಯರ ಸಂಖ್ಯೆ 13450 ಪೈಕಿ 1955 ಸದಸ್ಯರು ಮಹಾಸಭೆಯಲ್ಲಿ ಭಾಗಿಯಾಗಿರುವುದು ಉಲ್ಲೇಖ (1) ರಲ್ಲಿ ಕಾರ್ಯದರ್ಶಿ ಸಲ್ಲಿಸಿರುವ ದಾಖಲೆಗಳಿಂದ ವ್ಯಕ್ತವಾಗುತ್ತದೆ. ಮುಂದುವರೆದು ಸದರಿ ಸಂಘದ 54ನೇ ಮಹಾಸಭೆಯು ಸಂಘವನ್ನು ವಿಭಜಿಸುವ ಸಲುವಾಗಿ ಕೈಗೊಂಡಿರುವ ನಿರ್ಣಯವು ಸಹಕಾರ ಸಂಘಗಳ 1960 ರ ನಿಯಮಾವಳಿಗಳ ನಿಯಮ 14ಎಜೆ (10) – All decisions shall be taken by a simple majority of the members present in the general meeting unless stated otherwise in the Act, the rules or the bye-laws. When there is an equality of votes for or against a decision on any subject other than election, the chairperson of the meeting shall have a second or casting vote. ರ ಅವಕಾಶಗಳಿಗೆ ಒಳಪಟ್ಟು ಕೈಗೊಂಡಿರುವ ನಿರ್ಣಯವಾಗಿರುವುದನ್ನು ಗಮನಿಸಲಾಗಿದೆ. ಆದರೆ ಈ ನಿರ್ಣಯಕ್ಕೆ ಅಸಮ್ಮತಿ ವ್ಯಕ್ತಪಡಿಸಲು ನಿಯಮ 14ಎಜೆ (12) – The chief executive shall record the minutes of the proceedings of the meeting truly and accurately as per the deliberations in the meeting in the book kept for the purpose with its pages consecutively numbered. When any member expresses dissent in the deliberations on any subject, the Chief Executive shall record the same truly and accurately. The minutes of the meeting shall contain a fair and correct summary of the deliberations thereat. ರಲ್ಲಿ ವಿಪುಲ ಅವಕಾಶವಿದ್ದು, ಈ ಅವಕಾಶದನ್ವಯ ಸದರಿ ಸಂಘದ 54ನೇ ಮಹಾಸಭೆಯ ನಡವಳಿಗಳಲ್ಲಿ ಸದಸ್ಯರು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿಲ್ಲದಿರುವುದನ್ನು ಗಮನಿಸಲಾಗಿದೆ ಹಾಗೂ 54ನೇ ಮಹಾಸಭೆಯ ನಡವಳಿಗಳನ್ನು ನಿಯಮ 14ಎಜೆ(13) ರಂತೆ ಕ್ರಮವಿಟ್ಟಿರುವುದನ್ನು ಗಮನಿಸಲಾಗಿದೆ.

ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಈ ಸಂಘದ 54ನೇ ವಾರ್ಷಿಕ ಮಹಾಸಭೆಯಲ್ಲಿ ವಿಷಯ 13 ರಲ್ಲಿ ಕೈಗೊಂಡಿರುವ ನಿರ್ಣಯಗಳು ಸಂಘದ ಹಿತಾಸಕ್ತಿಗೆ ಪೂರಕವಾಗಿರುವುದು ಮತ್ತು ವಿಭಜನೆ ನಂತರ ಚಾಲನೆಗೆ ಬರುವ ಹೊಸ ಸಂಘಗಳಿಂದ ಸದಸ್ಯರುಗಳಿಗೆ ಸಕಾರಾತ್ಮಕವಾಗಿ ಸ್ಪಂಧಿಸುವಂತಹ ವಾತಾವರಣ ಸೃಷ್ಟಿಯಾಗುವುದನ್ನು ಸಹ ಗಮನಿಸಲಾಗಿದ್ದು, ಈ ಅಂಶಗಳಲ್ಲದೇ ಯಾವುದೇ ಸಂಘದ ಹಿತಾಸಕ್ತಿಗೆ ಪೂರಕವಾಗುವಂತೆ ಮತ್ತು ಸದಸ್ಯರ ಹಿತಾಸಕ್ತಿಗಳನ್ನು ಕಾಪಾಡುವ ಅಂತಿಮ ಅಧಿಕಾರವು ಸಹಕಾರ ಸಂಘಗಳ ಕಾಯ್ದೆ 1959 **ಕಲಂ 26 – Final authority in a co-operative society. – (1) Subject to the provisions of this Act, the rules and the bye-laws, the final authority of a co-operative society shall vest in the general body of members** ರನ್ವಯ ಮಹಾಸಭೆಗೆ ದತ್ತವಾಗಿದ್ದು, ಈ ಅಧಿಕಾರದನ್ವಯ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ 54ನೇ ಮಹಾಸಭೆಯಲ್ಲಿ ಕೈಗೊಂಡಿರುವ ನಿರ್ಣಯವು ಅಂತಿಮ ಅಧಿಕಾರ ಹೊಂದಿರುವಂತಹ ಸಂಘದ ಮಹಾಸಭೆಯಲ್ಲಿ ಕೈಗೊಂಡಿರುವ ನಿರ್ಣಯವಾಗಿರುವುದರಿಂದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡಿ ಪ್ರಸ್ತಾಪಿತ **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ಮತ್ತು **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ಎಂಬ ಹೆಸರುಗಳಲ್ಲಿ ಸದರಿ ಪ್ರಸ್ತಾಪಿತ ಸಂಘಗಳ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ನೋಂದಾಯಿಸಿದಲ್ಲಿ ಪ್ರಸ್ತಾಪಿತ ಸಂಘಗಳು ಹಾಲಿ ಸದಸ್ಯರು ಮತ್ತು ಹೆಚ್‌ಎಎಲ್ ನೌಕರರಿಗೆ ಪೂರಕವಾದಂತಹ ಹಾಗೂ ಸಕಾರಾತ್ಮಕವಾದಂತಹ ಕೆಲಸ ಕಾರ್ಯಗಳನ್ನು ನಿರ್ವಹಿಸುವುದರ ಜೊತೆಗೆ ವಿಭಜನೆಗೆ ಪೂರ್ವ ಆಸ್ತಿ ಮತ್ತು ಜವಾಬ್ದಾರಿಗಳ ಹಂಚಿಕೆಯಿಂದಾಗಿ ಪ್ರಸ್ತಾಪಿತ ಸಂಘಗಳು ಆರ್ಥಿಕವಾಗಿಯೂ ಸದೃಢವಾಗಿ ಕಾರ್ಯನಿರ್ವಹಿಸುವ ಎಲ್ಲಾ ಸಾಧ್ಯತೆಗಳಿರುವುದನ್ನು ಮನಗಾಣಲಾಗಿದೆ. ಈ ಹಿನ್ನೆಲೆಯಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ದಿನಾಂಕ 14-09-2014 ರ ಮಹಾಸಭೆಯಲ್ಲಿ ಕೈಗೊಂಡ ಸರ್ವಾನುಮತದ ತೀರ್ಮಾನವನ್ನು ಪುರಸ್ಕರಿಸಲಾಗಿದೆ ಹಾಗೂ ಸದರಿ ಸಂಘದ ವಾರ್ಷಿಕ ಮಹಾಸಭೆಯಲ್ಲಿ ಕೈಗೊಂಡ ತೀರ್ಮಾನಗಳ ಆಧಾರವಾಗಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ಸದಸ್ಯರ ಹಿತಾಸಕ್ತಿಗೆ ಪೂರಕವಾಗಿ

ವಿಭಜಿಸುವುದು ಸೂಕ್ತವಾಗಿರುತ್ತದೆ. ಯಾವುದೇ ಸಂಘವನ್ನು ವಿಭಜನೆ ಮಾಡುವ ಸಲುವಾಗಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 14 – **Amalgamation, transfer of assets and liabilities and division of co-operative societies, - (1) A co-operative society may, by a resolution passed by a two-thirds majority of the members present and voting at a general meeting of the society.–**

(a) **divide itself into two or more co-operative societies; or**

(b) **transfer its assets and liabilities in whole or in part to any other co-operative society which by a like resolution agrees to such transfer.**

ಈ ಮೇಲಿನ ಅವಕಾಶದಂತೆ ಸಂಘವನ್ನು ವಿಭಜನೆ ಮಾಡಲು ಕಾನೂನು ಅವಕಾಶವಿದ್ದು ಮಹಾಸಭೆಯ ತೀರ್ಮಾನಗಳ ಆಧಾರವಾಗಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡಬಹುದಾಗಿದೆ. ಆದರೆ ಈ ಸಂಘವು ಮೂಲತಃ ದಿನಾಂಕ 04–02–1954 ರಲ್ಲಿ ನೋಂದಣಿಯಾಗಿ ಕಾರ್ಯಾರಂಭ ಮಾಡಿರುವ ಸಂಘವು ಪ್ರಥಮವಾಗಿ ಪತ್ತು ವ್ಯವಹಾರ ನಡೆಸಿರುವುದು, ನಂತರದಲ್ಲಿ ಗೃಹ ನಿರ್ಮಾಣ ಉದ್ದೇಶಗಳನ್ನು ಸಹ ಅಳವಡಿಸಿಕೊಂಡು, ಸಂಘದ ಉಪವಿಧಿಗಳಿಗೆ ತಿದ್ದುಪಡಿಗೆ ಅನುಮೋದನೆ ಪಡೆದು ಗೃಹ ನಿರ್ಮಾಣ ಸಹಕಾರ ಸಂಘಗಳು ನಿರ್ವಹಿಸುವ ಉದ್ದೇಶಗಳನುಸಾರ ಕಾರ್ಯನಿರ್ವಹಿಸಿರುವುದನ್ನು ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ವಿರುದ್ಧ, ಸಂಘವು ಸಂಬಂಧಪಟ್ಟವರುಗಳ ವಿರುದ್ಧ, ಸಂಘದ ಸದಸ್ಯರು ಮತ್ತು ಆಡಳಿತ ಮಂಡಲಿ ಹಾಗೂ ಪದಾಧಿಕಾರಿಗಳ ವಿರುದ್ಧ ಇಲಾಖೆಯಿಂದ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಅವಕಾಶಗಳನ್ವಯ ಶಾಸನಾತ್ಮಕವಾಗಿ ಮತ್ತು ಆಡಳಿತಾತ್ಮಕವಾಗಿ ಅನೇಕ ಕ್ರಮಗಳನ್ನಿಟ್ಟಿರುವ ಹಿನ್ನೆಲೆಯಲ್ಲಿ ಪ್ರಸ್ತುತ 54ನೇ ಮಹಾಸಭೆಯ ತೀರ್ಮಾನದ ಆಧಾರವಾಗಿ ಸಂಘದ ವಿಭಜನೆ ಮಾಡುವ ಸಂದರ್ಭದಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವು ನಡೆಸಿರುವ ಎಲ್ಲಾ ವ್ಯವಹಾರಗಳಿಗೆ ನಿರ್ದಿಷ್ಟವಾಗಿ ಷರತ್ತುಗಳನ್ನು ವಿಧಿಸಿ ವಿಭಜನೆ ಮಾಡಲು ಕಷ್ಟಸಾಧ್ಯವಾಗಿರುವ ಹಿನ್ನೆಲೆಯಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ದಿನಾಂಕ 14–09–2014 ರ ಮಹಾಸಭೆಯಲ್ಲಿ ಕೈಗೊಂಡ ತೀರ್ಮಾನದ ಆಧಾರವಾಗಿ ಸದರಿ ಸಂಘದ ಕಾರ್ಯದರ್ಶಿ ಮತ್ತು ಅಧ್ಯಕ್ಷರು ಸಲ್ಲಿಸಿರುವ ದಾಖಲಾತಿಗಳ ಆಧಾರವಾಗಿ ಈ ಕೆಳಕಂಡ ಷರತ್ತುಗಳನ್ನು ವಿಧಿಸಿದೆ.

ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡುವ ಸಂಬಂಧವಾಗಿ ಎರಡು ಪ್ರತ್ಯೇಕ ಸಂಘಗಳ ನೋಂದಣಿ ಸಲುವಾಗಿ ನೋಂದಣಿ ಶುಲ್ಕವನ್ನು ಪಾವತಿಸಿರುತ್ತಾರೆ. ಈ ಪೈಕಿ ರೂ.2000/– ಗಳನ್ನು ಚಲನ್ ಸಂಖ್ಯೆ 79 ದಿನಾಂಕ 29–12–2014 ರಲ್ಲಿ **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ನೋಂದಣಿ ಶುಲ್ಕವಾಗಿ ಅದೇ ರೀತಿ ನೋಂದಣಿ ಶುಲ್ಕ ರೂ.1000/– ಗಳನ್ನು ಚಲನ್ ಸಂಖ್ಯೆ 78 ದಿನಾಂಕ 29–12–2014 ರಲ್ಲಿ **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"** ನೋಂದಾಯಿಸಲು ನೋಂದಣಿ ಶುಲ್ಕವಾಗಿ ಪಾವತಿಸಿ ನೋಂದಣಿಗೆ ಕೋರಿರುತ್ತಾರೆ. ಮುಂದುವರೆದು ಪ್ರಸ್ತಾವನೆಯಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘವನ್ನು ವಿಭಜನೆ ಮಾಡುವ ಮುನ್ನ ದಿನಾಂಕ 31–03–2014ರ ಅಂತ್ಯಕ್ಕೆ ಇದ್ದಂತೆ ಲೆಕ್ಕಪರಿಶೋಧನೆ ನಡೆಸಿ ದಿನಾಂಕ 14–09–2014 ರ ವಾರ್ಷಿಕ ಸರ್ವ ಸದಸ್ಯರ ಸಭೆಯಲ್ಲಿ ಮಂಡನೆ ಮಾಡಿರುತ್ತಾರೆ. ಸದರಿ ಸರ್ವ ಸದಸ್ಯರ ಸಭೆಯಲ್ಲಿ ವಿಭಜನೆ ನಂತರ ರಚಿಸಲ್ಪಡುವ ಪ್ರತ್ಯೇಕ ಎರಡು ಸಂಘಗಳ ವ್ಯವಹಾರಗಳು ಅಂದರೆ ಗೃಹ ನಿರ್ಮಾಣ ಸಹಕಾರ ಸಂಘದ ಕಾರ್ಯಗಳು ಮತ್ತು ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ದಿನಾಂಕ 31–03–2014 ರ ಅಂತ್ಯಕ್ಕೆ ಇದ್ದಂತೆ ಪ್ರತ್ಯೇಕವಾಗಿ ತಾತ್ಕಾಲಿಕ ಲೆಕ್ಕತಃಖ್ತೆಗಳನ್ನು ತಯಾರಿಸಿ ಮಹಾಸಭೆಯಲ್ಲಿ ಮಂಡಿಸಿರುತ್ತಾರೆ. ದಿನಾಂಕ 31–03–2014 ರ ನಂತರ ದಿನಾಂಕ 14–09–2014 ರ ಮಹಾಸಭೆಯಲ್ಲಿ ಮತ್ತು ಈ ಆದೇಶ ಹೊರಡಿಸುವವರೆಗೆ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದಲ್ಲಿ ಗೃಹ ನಿರ್ಮಾಣ ಸಹಕಾರ ಸಂಘದ ಮತ್ತು ಪತ್ತು ವ್ಯವಹಾರಗಳ ಸಂಘದ ಲೆಕ್ಕತಃಖ್ತೆಗಳನ್ನು ಈ ಪ್ರಸ್ತಾವನೆ ಜೊತೆ ಸಲ್ಲಿಸದೇ ಇರುವುದನ್ನು ಗಮನಿಸಲಾಗಿದೆ. ಆದರೆ ತಾಂತ್ರಿಕವಾಗಿ ಯಾವುದೇ ಸಹಕಾರ ಸಂಘದ ಎಲ್ಲಾ ಲೆಕ್ಕತಃಖ್ತೆಗಳನ್ನು ಸದರಿ ಸಂಘದ ವಾರ್ಷಿಕ ಮಹಾಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆಯುವುದು ಕಾನೂನು ಕಡ್ಡಾಯವಾಗಿರುವ ಹಿನ್ನೆಲೆಯಲ್ಲಿ ಈ ಬಗ್ಗೆ ಸೂಕ್ತ ಕ್ರಮವಿಡುವ ಜವಾಬ್ದಾರಿಯು ಆಡಳಿತ ಮಂಡಲಿಯದಾಗಿರುತ್ತದೆ.

ಮುಂದಿನ ದಿನಗಳಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ಸಂಬಂಧಪಟ್ಟಂತೆ ಸಹಕಾರ ಸಂಘಗಳ ಕಾಯ್ದೆ, ನಿಯಮಗಳು, ಸಂಘದ ಉಪವಿಧಿಗಳು ಹಾಗೂ ಚಾಲ್ತಿಯಲ್ಲಿರುವ ಯಾವುದೇ ಕಾನೂನು ಅವಕಾಶಗಳನ್ವಯ ವಿಭಜನೆಗೆ ಪೂರ್ವ ಸಂಘದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯಗಳಲ್ಲಿ, ಯಾವುದೇ ಪ್ರಾಧಿಕಾರಗಳಲ್ಲಿ, ಯಾವುದೇ ಇಲಾಖೆಗಳಲ್ಲಿ ವಿಚಾರಣೆಗಳು ಅಥವಾ ಇನ್ನಿತರೆ ಯಾವುದೇ ವಿಧದ ಸರ್ಕಾರಿ ಅಥವಾ ಸರ್ಕಾರೇತರ ಅಥವಾ ಖಾಸಗಿಯಾಗಿ ದಾವೆಗಳು, ವಿಚಾರಣೆಗಳು ಇಲಾಖಾ ಗಮನಕ್ಕೆ ಬಂದಲ್ಲಿ ಅಂತಹ ಸಂದರ್ಭಗಳಲ್ಲಿ ಸಂಬಂಧಪಟ್ಟವರುಗಳ ವಿರುದ್ಧ ಸೂಕ್ತ ಕಾನೂನು ಕ್ರಮವಿಡುವ ಹಾಗೂ ಸಂಬಂಧಪಟ್ಟವರಿಗೆ ಜವಾಬ್ದಾರಿಯನ್ನು ನಿಗಧಿಪಡಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡು ಈ ಕೆಳಕಂಡ ಷರತ್ತುಗಳನ್ನು ವಿಭಜನೆಗೆ ನಿಗಧಿ ಮಾಡಲಾಗಿದೆ.

**ಷರತ್ತುಗಳು :**

1. **ಸಹಕಾರ ಸಂಘಗಳ ಕಾಯ್ದೆ 1959 ಕಲಂ 14(4) – ಸಹಕಾರ ಸಂಘವು, ಅಂಥ ಯಾವುದೇ ನಿರ್ಣಯವನ್ನು ಅಂಗೀಕರಿಸಿದಾಗ ಮತ್ತು ಅದನ್ನು ರಿಜಿಸ್ಟ್ರಾರನು ಅನುಮೋದಿಸಿದಾಗ, ಸಹಕಾರ ಸಂಘವು, ತನ್ನ ಎಲ್ಲ ಸಾಲಿಗರಿಗೆ ಮತ್ತು ಆ ನಿರ್ಣಯದ ಪರವಾಗಿ ಮತ ನೀಡದಿದ್ದ ಸಂಘದ ಸದಸ್ಯರಿಗೆ, ಆ ಬಗ್ಗೆ ಲಿಖಿತ ನೋಟೀಸು ಕೊಡತಕ್ಕದ್ದು ಮತ್ತು ತದ್ವಿರುದ್ಧವಾದ ಯಾವುದೇ ಉಪವಿಧಿಗಳು ಅಥವಾ ಕರಾರು ಇದ್ದರೂ, ಅಂಥ ನೋಟೀಸು ಕೊಡಲಾಗಿದ್ದ ಯಾರೇ ಸಾಲಿಗರಿಗೆ ಅಥವಾ ಸದಸ್ಯನಿಗೆ ಅವನಿಗೆ ನೋಟೀಸು ಜಾರಿಯಾದ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗೆ, ಸಂದರ್ಭಾನುಸಾರ, ತನ್ನ ಷೇರುಗಳನ್ನು, ಠೇವಣಿಗಳನ್ನು ಅಥವಾ ಸಾಲಗಳನ್ನು ಹಿಂತೆಗೆದುಕೊಳ್ಳುವ ಆಯ್ಕೆಯ ಅವಕಾಶ ಇರತಕ್ಕದ್ದು.**_ಈ ಅವಕಾಶದನ್ವಯ ಕ್ರಮವಿಡತಕ್ಕದ್ದು.

**ಮತ್ತು**

**14(5) (4)ನೇ ಉಪಪ್ರಮಾಣದಲ್ಲಿ ನಿರ್ದಿಷ್ಟಪಡಿಸಲಾದ ಅವಧಿಯೊಳಗೆ ತನ್ನ ಆಯ್ಕೆಯ ಅವಕಾಶವನ್ನು ಚಲಾಯಿಸದಿರುವ ಯಾರೇ ಸದಸ್ಯನು ಅಥವಾ ಸಾಲಿಗನು ಮತ್ತು ನಿರ್ಣಯದ ಪರವಾಗಿ ಮತ ನೀಡಿದ ಪ್ರತಿಯೊಬ್ಬ ಸದಸ್ಯನು, ನಿರ್ಣಯದಲ್ಲಿ ಇರುವ ಪ್ರಸ್ತಾವಗಳಿಗೆ ಸಮ್ಮತಿ ನೀಡಿರುವುದಾಗಿ ಭಾವಿಸತಕ್ಕದ್ದು.**

**(6) ಈ ಪ್ರಕರಣದ ಮೇರೆಗೆ ಸಹಕಾರ ಸಂಘವು ಅಂಗೀಕರಿಸಿದ ನಿರ್ಣಯವು, –**

**(ಎ) ಅದಕ್ಕೆ ಈ ಪ್ರಕರಣದ ಮೇರೆಗೆ ಎಲ್ಲ ಸದಸ್ಯರ ಮತ್ತು ಸಾಲಿಗರ ಸಮ್ಮತಿ ಪಡೆಯುವ ತನಕ ಅಥವಾ ಪಡೆಯಲಾಗಿದೆಯೆಂದು ಭಾವಿಸುವ ತನಕ; ಅಥವಾ**

**(ಬಿ) (4)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಆಯ್ಕೆಯ ಅವಕಾಶವನ್ನು ಅದರಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಚಲಾಯಿಸಿರುವ ಸದಸ್ಯರ ಮತ್ತು ಸಾಲಿಗರ ಎಲ್ಲ ಕ್ಲೇಮುಗಳನ್ನು ಸಂಪೂರ್ಣವಾಗಿ ಪೂರೈಸುವ ತನಕ – ಜಾರಿಯಾಗತಕ್ಕುದಲ್ಲ.**

ಮೇಲಿನ ಕಾನೂನು ಅವಕಾಶಗಳನ್ವಯ ವಿಭಜನೆ ನಂತರ ಆಡಳಿತ ನಡೆಸುವ ಮತ್ತು ಕಾಲ ಕಾಲಕ್ಕೆ ಅನ್ವಯವಾಗುವಂತಹ ಆಡಳಿತಾಧಿಕಾರಿ, ವಿಶೇಷಾಧಿಕಾರಿ, ಪದಾಧಿಕಾರಿಗಳು ಮತ್ತು ಆಡಳಿತ ಮಂಡಲಿಯು ಹಾಗೂ ಮುಖ್ಯ ಕಾರ್ಯನಿರ್ವಾಹಕ ಕಡ್ಡಾಯವಾಗಿ ಕ್ರಮವಿಡತಕ್ಕದ್ದು.

2. ವಿಭಜನೆಯ ನಿಕಟಪೂರ್ವದಲ್ಲಿದ್ದಂತಹ ಸಂಘದ ಸಿಬ್ಬಂದಿಗಳು/ನೌಕರರು ವಿಭಜನೆಯಾದ ಪ್ರತ್ಯೇಕ ಸಹಕಾರ ಸಂಘಗಳಲ್ಲಿ ಸೇವೆಯನ್ನು ಮುಂದುವರೆಸುವ ಬಗ್ಗೆ ಆಯ್ಕೆ ಮಾಡಿಕೊಳ್ಳಲು ಒಂದು ತಿಂಗಳ ಮುಕ್ತ ಕಾಲಾವಕಾಶದ ನೋಟೀಸ್ ನೀಡತಕ್ಕದ್ದು. ಈ ಬಗ್ಗೆ ಕಾಲಕಾಲಕ್ಕೆ ಅನುಗುಣವಾಗುವ ಆಡಳಿತಾಧಿಕಾರಿ, ವಿಶೇಷಾಧಿಕಾರಿ, ಆಡಳಿತ ಮಂಡಲಿ ನಿರ್ದೇಶಕರು ಒಳಗೊಂಡಂತೆ ಪದಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕ ಕಡ್ಡಾಯವಾಗಿ ಕ್ರಮವಿಡತಕ್ಕದ್ದು.

3. ವಿಭಜನೆಯಾದ ನಂತರ ವಿಭಜನೆಗೂ ಪೂರ್ವ ಇದ್ದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಹಕಾರ ಸಂಘದ ಪರವಾಗಿ ಅಥವಾ ವಿರುದ್ಧವಾಗಿ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳು, ವಿಭಜಿತ ಹೊಂದಿದ ಸಂಘದ ಉಪವಿಧಿಗಳು, ಚಾಲ್ತಿಯಲ್ಲಿರುವ ಯಾವುದೇ ಕಾನೂನು ಅವಕಾಶಗಳನ್ವಯ, ಯಾವುದೇ ನ್ಯಾಯಾಲಯಗಳಲ್ಲಿ, ಯಾವುದೇ ಪ್ರಾಧಿಕಾರಗಳಲ್ಲಿ, ಯಾವುದೇ ಇಲಾಖೆಗಳಲ್ಲಿ ವಿಚಾರಣೆಗಳು ಅಥವಾ ಇನ್ನಿತರೆ ಯಾವುದೇ ವಿಧದ ಸರ್ಕಾರಿ ಅಥವಾ ಸರ್ಕಾರೇತರ ಅಥವಾ ಖಾಸಗಿಯಾಗಿ ದಾವೆಗಳು, ವಿಚಾರಣೆಗಳು ಉದ್ಭವವಾದಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ಆಡಳಿತ ಮಂಡಲಿ ಪದಾಧಿಕಾರಿಗಳು, ಕಾರ್ಯದರ್ಶಿಗಳು, ಸದಸ್ಯರು ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70 ರ ಅವಕಾಶದಲ್ಲಿ ತಿಳಿಸಿರುವವರ ವಿರುದ್ದ ದಾಖಲಾಗುವಂತಹ ಪ್ರಕರಣಗಳಿಗೆ ವಿಭಜನೆಯಿಂದಾಗಿ ಚಾಲನೆಗೆ ಬರುವ ಸಂಘಗಳು ಅಳವಡಿಸಿಕೊಳ್ಳಲಾಗಿರುವ ಉದ್ದೇಶಗಳಿಗೆ ಅನುಗುಣವಾಗಿ ವಿಭಜನೆಗೆ ಪೂರ್ವ ಚಾಲ್ತಿಯಲ್ಲಿದ್ದ ಉದ್ದೇಶಗಳಿಗೆ ಹೊಂದಾಣಿಕೆಯಾಗುವಂತೆ ಹೊಸ ಸಂಘಗಳು ಕರ್ತವ್ಯ, ಜವಾಬ್ದಾರಿ ಮತ್ತು ಎಲ್ಲಾ ವಿಧದ ಹಕ್ಕು ಬಾಧ್ಯತೆಗಳಿಗೆ ಒಳಪಟ್ಟಿರುತ್ತವೆ.

4. ವಿಭಜನೆಗೆ ಪೂರ್ವ ಇದ್ದ ಸಂಘ, ನಂತರದಲ್ಲಿ ವಿಭಜನೆಯಿಂದಾಗಿ ಅಸ್ತಿತ್ವಕ್ಕೆ ಬರುವ ಸಂಘಗಳ ಯಾವುದೇ ವ್ಯವಹಾರಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು 1960ರ ನಿಯಮಗಳು, ಉಪವಿಧಿಗಳು ಮತ್ತು ಚಾಲ್ತಿಯಲ್ಲಿರುವ ಯಾವುದೇ ಕಾನೂನು ಅವಕಾಶಗಳನ್ವಯ ಬಾಧಿತರು ದಾವೆಗಳನ್ನು ದಾಖಲು ಮಾಡಿ ಪರಿಹಾರ ಕಂಡುಕೊಳ್ಳಲು ಮುಕ್ತರಾಗಿರುತ್ತಾರೆ.

5. ವಿಭಜನೆಗೆ ಪೂರ್ವ ಇದ್ದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ಯಾವುದೇ ವ್ಯವಹಾರಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1950 ಮತ್ತು 1960ರ ನಿಯಮಗಳು, ಸಂಘದ ಉಪವಿಧಿಗಳ ಅವಕಾಶದನ್ವಯ ಇಲಾಖೆಯು ಶಾಸನಾತ್ಮಕ ವಿಚಾರಣೆ ನಡೆಸಲು, ಶಾಸನಾತ್ಮಕ ಆದೇಶ ಹೊರಡಿಸಲು ಮತ್ತು ಆಡಳಿತಾತ್ಮಕ ಆದೇಶ ಹೊರಡಿಸಲು ಅಧಿಕಾರ ಹೊಂದಿರುತ್ತದೆ.

6. ವಿಭಜನೆಗೆ ಪೂರ್ವ ಇದ್ದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ಸದಸ್ಯರ ಪೈಕಿ ಯಾವುದೇ ಸದಸ್ಯರು ನಿಧನರಾಗಿದ್ದಲ್ಲಿ ಅವರ ವಾರಸುದಾರರು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಅವಕಾಶಗಳಿಗೆ ಒಳಪಟ್ಟು ಮುಖ್ಯವಾಗಿ ಸಂಘದ ಉಪವಿಧಿಗಳ ಅವಕಾಶಗಳಿಗೆ ಒಳಪಟ್ಟು ಸದಸ್ಯರಾಗಲು ಅರ್ಹರಾಗಿರುತ್ತಾರೆ. ಅದೇ ರೀತಿ ಸಂಘದ ಉಪವಿಧಿಗಳ ಅವಕಾಶಗಳಿಗೆ ಒಳಪಡದೇ ಇದ್ದಲ್ಲಿ ಸಂದರ್ಭಾನುಸಾರ ಸಹ ಸದಸ್ಯತ್ವ ಅಥವಾ ನಾಮಮಾತ್ರ ಸದಸ್ಯತ್ವ ಹೊಂದಲು ಅವಕಾಶ ಹೊಂದಿರುತ್ತಾರೆ.

7. ಈ ವಿಭಜನೆಯ ನಂತರ ಹೊಸದಾಗಿ ರಚಿತವಾಗುವ ಸಂಘಗಳ ಆಡಳಿತ ಮಂಡಲಿಗಳು ವಿಭಜನೆಗೊಳಪಟ್ಟ ಸಂಘದ ಲೆಕ್ಕಪರಿಶೋಧನೆ ಪೂರ್ಣಗೊಂಡಿರುವ ಅವಧಿಯ ನಂತರದಿಂದ ಈ ಆದೇಶದ ದಿನಾಂಕದವರೆಗೆ ಸಂಪೂರ್ಣ ವ್ಯವಹಾರಗಳಿಗೆ ಲೆಕ್ಕಪರಿಶೋಧನೆಯನ್ನು ಮಾಡಿಸಿ ಅದನ್ನು ಹೊಸದಾಗಿ ರಚಿತವಾದ ಸಂಘಗಳ ಆಡಳಿತ ಮಂಡಳಿಗಳು ಜಂಟಿ ವಿಶೇಷ ವಾರ್ಷಿಕ ಮಹಾಸಭೆಯನ್ನು ನಡೆಸಿ ಲೆಕ್ಕತಃಖ್ತೆಯನ್ನು ಮಂಡಿಸಿ ಜಂಟಿ ವಿಶೇಷ ವಾರ್ಷಿಕ ಮಹಾಸಭೆಯಲ್ಲಿ ಅನುಮೋದನೆ ಪಡೆಯತಕ್ಕದ್ದು ಹಾಗೂ ಲೆಕ್ಕತಃಖ್ತೆಯಲ್ಲಿ ಅವ್ಯವಹಾರಗಳಾಗಿರುವುದು ವ್ಯಕ್ತವಾದಲ್ಲಿ ಈ ಬಗ್ಗೆ ವಿಭಜನೆಯಿಂದ ಹೊಸದಾಗಿ ರಚಿಸಲ್ಪಟ್ಟಿರುವ ಸಂಘಗಳ ಉದ್ದೇಶಗಳಿಗೆ ಅನುಗುಣವಾಗಿ ಆಯಾ ಸಂಘದ ಆಡಳಿತ ಮಂಡಲಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1950 ಮತ್ತು ನಿಯಮ 1960ರಡಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತ್ಯಾ ಕ್ರಮವಿಡುವ ಜವಾಬ್ದಾರಿ ಹೊಂದಿರುತ್ತಾರೆ.

ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ವಿಭಜನೆಗೆ ಪೂರ್ವ ಅಸ್ತಿತ್ವದಲ್ಲಿದ್ದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ಆಡಳಿತ ಮಂಡಲಿ, ಕಾರ್ಯದರ್ಶಿ ಮತ್ತು ಸಂಬಂಧಪಟ್ಟವರುಗಳು ಹಾಗೂ ವಿಭಜನೆ ನಂತರ ಅಸ್ತಿತ್ವಕ್ಕೆ ಬರುವ ಸಂಘಗಳ ಆಡಳಿತ ಮಂಡಲಿ, ಕಾರ್ಯದರ್ಶಿ ಮತ್ತು ಸಂಬಂಧಪಟ್ಟವರುಗಳು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮ, ವಿಭಜನೆಗೊಳಪಟ್ಟ ಸಂಘದ ಉಪನಿಯಮ, ಹೊಸದಾಗಿ ರಚಿತವಾದ ಸಂಘಗಳ ಉಪವಿಧಿಗಳು ಹಾಗೂ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ಕಾಲಕಾಲಕ್ಕೆ ಹೊರಡಿಸಿರುವ ಸುತ್ತೋಲೆಗಳ ಅವಕಾಶಗಳನ್ವಯ ಕಾನೂನು ಕ್ರಮಕ್ಕೆ ಒಳಪಟ್ಟಿದ್ದು, ಈ ಅಂಶಗಳ ಹಿನ್ನೆಲೆಯಲ್ಲಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಈ ಸಹಕಾರ ಸಂಘವನ್ನು ವಿಭಜಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 7, 8, 14, 15 ಮತ್ತು 28–ಎ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/139/ಸಿಎಲ್ಎಂ/2010 ದಿನಾಂಕ:17–02–2011 ರಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿ.ಸಿ.ಸತೀಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಮತ್ತು ಪ್ರಸ್ತಾವನೆಯಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳನ್ನು ಸಂಬಂಧಪಟ್ಟವರು ಪಾಲನೆ ಮಾಡುವ ಷರತ್ತುಗಳಿಗೆ ಒಳಪಟ್ಟು **ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು** ಸಂಘದ ವಾರ್ಷಿಕ ಮಹಾಸಭೆ ದಿನಾಂಕ 14–09–2014 ರ ವಿಷಯ 13 ರಲ್ಲಿ ಕೈಗೊಂಡಿರುವ ಸರ್ವಾನುಮತದ ತೀರ್ಮಾನವನ್ನು ಪುರಸ್ಕರಿಸಿ

**ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು** ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 14(1)(ಎ)(ಬಿ)ರ ಅವಕಾಶಗಳನ್ವಯ ವಿಭಜನೆ ಮಾಡಿ ಈ ಕೆಳಕಂಡ

1. **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"**

ಮತ್ತು

2. **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"**

ಗಳಾಗಿ ಪ್ರತ್ಯೇಕ ಎರಡು ಸಹಕಾರ ಸಂಘಗಳಾಗಿ ವಿಭಜಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ (7) ರನ್ವಯ ನೋಂದಣಿ ಮಾಡಿ ಆದೇಶಿಸಿರುತ್ತೇನೆ.

**ಮೇಲಿನ ವಿಭಜನೆಯಿಂದಾಗಿ ಅಸ್ತಿತ್ವಕ್ಕೆ ಬಂದಿರುವ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದರ ಉಪವಿಧಿಗಳನ್ನು (ಉಪವಿಧಿಗಳ ಸಂಖ್ಯೆ : 1 ರಿಂದ 116 ರವರೆಗೆ ಹಾಗೂ ಪುಟ ಸಂಖ್ಯೆ : 1 ರಿಂದ 95 ರವರೆಗೆ) ಅದೇ ರೀತಿ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದರ ಉಪವಿಧಿಗಳನ್ನು (ಉಪವಿಧಿಗಳ ಸಂಖ್ಯೆ : 1 ರಿಂದ 136 ರವರೆಗೆ ಹಾಗೂ ಪುಟ ಸಂಖ್ಯೆ : 1 ರಿಂದ 107 ರವರೆಗೆ) ಅನುಮೋದಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 8 ರನ್ವಯ ನೋಂದಣಿ ಮಾಡಿ ಪ್ರಮಾಣ ಪತ್ರವನ್ನು ನೀಡಿರುತ್ತೇನೆ.**

ಮೇಲಿನಂತೆ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಹಕಾರ ಸಂಘವು ವಿಭಜನೆಯಾಗಿರುವ ಕಾರಣದಿಂದಾಗಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು, ಈ ಸಹಕಾರ ಸಂಘವು ಮೈಸೂರು ಸಹಕಾರ ಸಂಘಗಳ ಕಾಯ್ದೆ 1948ರಡಿ ನೋಂದಣಿ ಸಂಖ್ಯೆ:210/ಡಿಆರ್ ದಿನಾಂಕ:04–02–1954ರಲ್ಲಿ ನೋಂದಣಿಯಾಗಿ, ಪತ್ತಿನ ಕಾರ್ಯನಿರ್ವಹಣೆಯ ಸಂಘದ ಉದ್ದೇಶಗಳನ್ನು ಹೊಂದಿ ಕಾರ್ಯನಿರ್ವಹಿಸುತ್ತಿರುತ್ತದೆ ಮತ್ತು ತದನಂತರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಉಪ ವಿಭಾಗ, ಬೆಂಗಳೂರು, ಇವರು ನೀಡಿರುವ ಪ್ರಮಾಣ ಪತ್ರ ಸಂಖ್ಯೆ:ಡಿ/ಆರ್.ಜಿ.ಎನ್./7675/64, ದಿನಾಂಕ:17/18–12–1964ರಂತೆ ಸಂಘವು ಗೃಹ ನಿರ್ಮಾಣ ಉದ್ದೇಶಗಳನ್ನು ನಿರ್ವಹಿಸಲು ಅನುಮತಿ ಪಡೆದು ಕಾರ್ಯನಿರ್ವಹಿಸುತ್ತಿರುವ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು, ಈ ಸಹಕಾರ ಸಂಘದ ನೋಂದಣಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಕಲಂ 15(3)ರ ಅವಕಾಶದನ್ವಯ ರದ್ದುಪಡಿಸಿರುತ್ತೇನೆ.

ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಹಕಾರ ಸಂಘವು ವಿಭಜನೆಯಾಗಿ ನೋಂದಣಿ ರದ್ದಾಗಿರುವ ಹಿನ್ನೆಲೆಯಲ್ಲಿ ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ಸಂಘಗಳಲ್ಲಿ ಆಡಳಿತ ಮಂಡಲಿ ಇರದೇ ಇರುವ ಕಾರಣ ಮತ್ತು ಹೊಸದಾಗಿ ಚುನಾವಣೆ ನಡೆಸಿ ಆಡಳಿತ ಮಂಡಲಿ ರಚನೆ ಮಾಡಬೇಕಾಗಿರುವ ಕಾರಣ ಸಹಕಾರ ಸಂಘಗಳ ಕಾಯ್ದೆ 1959 ಕಲಂ 28–ಎ(5) ರ ಅವಕಾಶದನ್ವಯ ಆಡಳಿತಾಧಿಕಾರಿ ನೇಮಕಾತಿ ಮಾಡಬೇಕಾಗಿರುವುದರಿಂದ ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಸಂಘದ ವಿಭಜನೆಯಿಂದ ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ

1. **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"**

ಸಂಘಕ್ಕೆ ಶ್ರೀ ಎನ್. ಲಕ್ಷಣ, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಕೇಂದ್ರ ವಲಯ, ಮಲ್ಲೇಶ್ವರಂ, ಬೆಂಗಳೂರು ರವರನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 03 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಿಸಲಾಗಿದೆ.

ಮತ್ತು

2. **"ದಿ ಏರ್‌ಕ್ರಾಫ್ಟ್ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು"**

ಸಂಘಕ್ಕೆ ಶ್ರೀ ಬಿ.ಹೆಚ್, ಬಾಬುರೆಡ್ಡಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಉತ್ತರ ವಲಯ, ಮಲ್ಲೇಶ್ವರಂ, ಬೆಂಗಳೂರು ರವರನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 03 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಿಸಲಾಗಿದೆ.

ಆಡಳಿತಾಧಿಕಾರಿ ಸಹಕಾರ ಸಂಘಗಳ ಕಾಯ್ದೆ ಕಲಂ 28–ಎ ರಡಿಯಲ್ಲಿ ತಿಳಿಸಿರುವ ಎಲ್ಲಾ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಹೊಂದಿದ್ದು, ಈ ಕಛೇರಿಯ ಅಧಿಕಾರ ವ್ಯಾಪ್ತಿಗೆ ಒಳಪಟ್ಟು ಕಾರ್ಯ ನಿರ್ವಹಿಸಲು ಆದೇಶಿಸಿದೆ.

ಆಡಳಿತಾಧಿಕಾರಿ ಸಹಕಾರ ಸಂಘಗಳ ಕಾಯ್ದೆ 1959 ಕಲಂ 14(5)(6) ಮತ್ತು (7) ರ ಅವಕಾಶಗಳಿಗೆ ಒಳಪಟ್ಟು ಕಾನೂನು ಪರಿಮಿತಿಯಲ್ಲಿ ಹಾಗೂ ಕಾಲಮಿತಿಯೊಳಗೆ ಚುನಾವಣೆ ನಡೆಸಿ ಹೊಸದಾಗಿ ಆಯ್ಕೆಯಾದ ಆಡಳಿತ ಮಂಡಲಿಗೆ ಪ್ರಭಾರ ವಹಿಸಿಕೊಡತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ : 05–01–2015 ರಂದು ಹೊರಡಿಸಿರುತ್ತೇನೆ.

**P.R. 60**
**SC-05**

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

## HIGH COURT OF KARNATAKA, BENGALURU

### NOTIFICATION

### No. GOB(1) 28/2014, DATED: 18TH DECEMBER, 2014.

**READ :**

1. Government of Karnataka Notification No. DPAR 06 PLX 2012 dated 06.11.2013 issued in regard to Karnataka Public Employment (Reservation in appointment for Hyderabad- Karnataka Region) order, 2013 providing reservation in all cadres up to Group-A (Junior Scale), as a consequence of inclusion of Art. 371 J to the Constitution of India.
2. The Karnataka Public Employment (Reservation in appointment for Hyderabad-Karnataka Region) (Organization of Local Cadres, Allotment and Transfer of persons) Rules, 2013, published by Government of Karnataka vide Notification No. DPAR 43 HKC 2013 dated 29.1.2014.

3. The Karnataka Public Employment (Reservation in appointment for Hyderabad-Karnataka Region) (Issue of Eligibility Certificates) Rules, 2013 published by Government of Karnataka vide Notification No. DPAR 43 HKC 2013 dated 29.1.2014.
4. Resolution of the Hon'ble High Court to provide reservations for "Local Persons" in the sanctioned strength of posts in the cadre of Civil Judges in the Karnataka State Judiciary, which is being the entry level post (Group-"A"), at the time of recruitment.
5. Notification No.GOB (I) 28/2014 dated 10th July, 2014 identifying number of posts reserved for local persons in the Karnataka State Judiciary.
6. General Circular No.GOB (I) 28/2014 dated 10th July, 2014, inviting options from the officers who satisfy the criteria of "Local Persons".
7. Options received from the officers (along with eligibility certificates wherever required).
8. Office noting dated 10.12.2014 and orders passed thereon.

After considering the irrevocable options tendered by the Officers of the Karnataka State Judiciary to join Local Cadre and on considering their home town entered in the service records as on 01.01.2013. or on the basis of eligibility certificates produced by the officers as required under the Karnataka Public Employment (Reservation in appointment for Hyderabad-Karnataka Region) order. 2013. and the rules made there under. the options of the officers enumerated hereunder at Table-A below are accepted and the said officers are allotted to the Local Cadre with immediate effect:-

**TABLE- 'A'**

**(GROUP-A)**

**CADRE:- CIVIL JUDGES**

| Sl. No. | Name of the Officer / present place of working (Smt/Sri) | Post Held | Home Town of officer declared/ Certified as Local person of district as per Eligibility Certificate |
|---|---|---|---|
| 1 | K.M. Rajendra Kumar.<br>Metropolitan Magistrate (Traffic Court-II ). Bengaluru City. | Civil Judge | Yadgir |
| 2 | Saraswathi Devi,<br>Prl. Civil Judge and JMFC. Jamkhandi. | Civil Judge | Raichur |
| 3 | Anand P.Hogade<br>Prl. Civil Judge and JMFC. Ramanagara. | Civil Judge | Kalaburagi |
| 4 | Zareena,<br>Prl. Civil Judge and JMFC. Ballari. | Civil Judge | Gangavathi, Koppal District. |
| 5 | Mohammed Moinuddin,<br>Prl. Civil Judge and JMFC, Hungund. | Civil Judge | Koppal |
| 6 | Santosh Siddappa Palledh,<br>JMFC II Court, Davanagere. | Civil Judge | Koppal |
| 7 | Prabhakara Rao<br>Deputy Registrar, Chief Metropolitan Magistrate Court, Bengaluru City. | Civil Judge | Lingasuguru,<br>Raichur District |
| 8 | Jeevanrao Vasantrao Kulkarni,<br>Prl. Civil Judge and JMFC, Malavalli. | Civil Judge | Kustagt, Koppal District |
| 9 | Nagaraj S.Ankasadoddi,<br>Prl. Civil Judge and JMFC, Bailhongal. | Civil Judge | Lingasuguru,<br>Raichur District |
| 10 | Hema Pastapur,<br>Prl. Civil Judge and JMFC, Athani. | Civil Judge | Kalaburagi |
| 11 | Umesh S.Atnure.<br>Prl. Civil Judge and JMFC, Khanapur. | Civil Judge | Aland. Kalaburagi District |
| 12 | Yamanappa<br>Karehanumanthappa, Civil Judge and JMFC, Hadagali | Civil Judge | Koppal |
| 13 | Mamatha. D.<br>Civil Judge and JMFC, Shiggaon. | Civil Judge | Ballari |

| | | | |
|---|---|---|---|
| 14 | Parashuram F.Doddamani,<br>Prl. Civil Judge and JMFC. Sirsi | Civil Judge | Koppal |
| 15 | Kirankumar D .Wadigerl,<br>Civil Judge and JMFC, Yelburga. | Civil Judge | Shahapur.<br>Yadgir District |
| 16 | Yamnoorappa Kanakappa Benal,<br>Civil Judge and JMFC. Shahapur. | Civil Judge | Kustagi,<br>Koppal District |
| 17 | Bhola Pandit,<br>Prl. Civil Judge and JMFC, Gangavathi. | Civil Judge | Humnabad, Bidar District |
| 18 | Aravind Saibanna Hagargi,<br>Civil Judge and JMFC,<br>Basavakalyan . | Civil Judge | Kalaburagi |
| 19 | Siddaram,<br>Civil Judge and JMFC, Bhalki. | Civil Judge | Kalaburagi |
| 20 | Tayyaba Sultana,<br>Civil Judge and JMFC, KudligL | Civil Judge | Raichur |
| 21 | B. T. Annapoorneshwari,<br>Prl. Civil Judge and JMFC II Court, Madikeri. | Civil Judge | Ballari |
| 22 | B. Chennappa,<br>Addl. Civil Judge and JMFC, Mudhol. | Civil Judge | Sindahnur ,<br>Raichur District. |
| 23 | Rajashekhar,<br>II Addl. Civil Judge and JMFC, Athani | Civil Judge | Jewargi, Kalaburagi District |
| 24 | Shivaraj.<br>Addl. Civil Judge and JMFC, Hungund. | Civil Judge | Nandagaon,<br>Bidar District. |
| 25 | Mariyappa,<br>Addl, Civil Judge and JMFC. Bangarpet. | Civil Judge | Turuvihal,<br>Raichur District |

a) It is hereby informed that such of those officers opting the Local Cadre as stated above will move from the parent cadre to the respective local Cadre along with their seniority and roster point.

b) A separate seniority list will be maintained for local cadre posts to which the officers are allotted. The allottees are governed by provisions of the Karnataka Public Employment (Reservation in appointment for Hyderabad-Karnataka Region) Order, 2013 and Rules/Notifications/Official Memorandums/or any orders issued there under from time to time.

c) The options exercised being **irrevocable, such officers whose options are accepted as shown above will not be permitted** to come back to residual parent cadre.

BY ORDER OF THE HON'BLE CHIEF JUSTICE,
**B.A. PATIL**
REGISTRAR GENERAL.

**P.R. 58**

## DIRECTORATE OF ECONOMICS AND STATISTICS, BANGALORE-1

### Consumer Price Index Numbers for Industrial Workers

### No. DES 24 PWX 2014, dated 02-01-2015

**State : Karnataka** **Base : 1987-88=100** **Month : November**
**Date:02-01-2015**

| Group/Sub-Group | | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD: | | | | | | | | | | | |
| | (a) Cereals & Cereals Products | 989 | 956 | 1124 | 826 | 928 | 1023 | 995 | 1045 | 806 | 1112 | 1000 |
| | (b) Pulses & Pulse Products | 725 | 786 | 827 | 919 | 743 | 765 | 789 | 832 | 850 | 773 | 767 |

| | | | | | | | | | | | | |
|---|---|---|---|---|---|---|---|---|---|---|---|---|
| | (c) Oil & Fats | 469 | 413 | 462 | 413 | 429 | 449 | 421 | 499 | 440 | 409 | 438 |
| | (d) Meat Fish & Eggs | 907 | 1114 | 1149 | 1023 | 1151 | 1061 | 960 | 1079 | 728 | 1213 | 1103 |
| | (e) Milk & Milk Products | 757 | 708 | 775 | 879 | 761 | 784 | 758 | 797 | 684 | 776 | 763 |
| | (f) Condiments & Spices | 647 | 751 | 1018 | 946 | 623 | 662 | 897 | 887 | 724 | 761 | 818 |
| | (g) Vegetables & Fruits | 774 | 916 | 1073 | 1038 | 740 | 875 | 979 | 1098 | 826 | 612 | 1348 |
| | (h) Other Food | 615 | 961 | 911 | 940 | 736 | 663 | 758 | 770 | 801 | 671 | 663 |
| | **FOOD GROUP INDEX** | **802** | **871** | **973** | **872** | **795** | **821** | **864** | **937** | **760** | **882** | **881** |
| **II.** | Pan, Supari, Tobacco & Intoxicants | 841 | 1102 | 947 | 952 | 766 | 1014 | 807 | 863 | 607 | 769 | 915 |
| **III.** | Fuel & Light | 677 | 628 | 709 | 784 | 739 | 731 | 707 | 760 | 606 | 966 | 526 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 367 | 575 | 513 | 497 | 404 | 464 | 621 | 749 | 364 | 730 | 236 |
| **VI.** | **Miscellaneous:** | | | | | | | | | | | |
| | (a) Medical Care | 813 | 966 | 703 | 520 | 406 | 399 | 688 | 694 | 465 | 533 | 374 |
| | (b) Education, Recreation & Amusement | 900 | 762 | 1248 | 544 | 1004 | 1148 | 854 | 641 | 1162 | 1585 | 1048 |
| | (c) Transport & Communication | 844 | 842 | 773 | 788 | 868 | 800 | 818 | 1115 | 920 | 777 | 778 |
| | (d) Personal Car & effects | 444 | 560 | 590 | 630 | 751 | 480 | 510 | 553 | 547 | 543 | 492 |
| | (e) Other | 662 | 573 | 713 | 865 | 508 | 511 | 544 | 750 | 423 | 706 | 473 |
| | Miscellaneous Group | 681 | 698 | 779 | 658 | 705 | 647 | 645 | 686 | 682 | 766 | 597 |
| | **GENERAL INDEX** | 660 | 710 | 775 | 721 | 645 | 664 | 718 | 775 | 638 | 763 | 596 |
| | To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು.

**Government of India**
**Ministry of Labour**
**Labour Bureau**

**NO. 112/1 (KTK) /2014 CPI Dated: 31-12-2014**

**Consumer Price Index Numbers for Industrial Workers (Base : 2001=100)**

**Month : November, 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD :** | | | | | |
| (a) Cereals & Cereals Products | 273 | 300 | 277 | 265 | 293 |
| (b) Pulses & Pulses Products | 274 | 272 | 281 | 275 | 257 |
| (c) Oils & Fats | 237 | 263 | 204 | 282 | 214 |
| (d) Meat, Fish & Eggs | 366 | 335 | 361 | 319 | 327 |

| | | | | | |
|---|---|---|---|---|---|
| (e) Milk & Milk Products | 313 | 277 | 252 | 266 | 291 |
| (f) Condiments & Spices | 249 | 301 | 297 | 279 | 284 |
| (g) Vegetables & Fruits | 396 | 348 | 345 | 333 | 359 |
| (h) Other Food | 269 | 299 | 277 | 282 | 276 |
| **FOOD GROUP** | 291 | 302 | 283 | 285 | 294 |
| Pan, Supari, Tobacco & Intoxicants | 267 | 273 | 294 | 237 | 312 |
| Fuel & Light | 212 | 186 | 210 | 351 | 213 |
| Housing index | 242 | 226 | 354 | 102 | 276 |
| Clothing, Bedding & Footwear | 170 | 161 | 172 | 191 | 157 |
| Miscellaneous | | | | | |
| (a) Medical care | 199 | 244 | 216 | 232 | 190 |
| (b) Education, Recreation and Amusement | 163 | 182 | 183 | 332 | 135 |
| (c) Transport and Communication | 320 | 341 | 328 | 303 | 273 |
| (d) Personal Care & Effects | 209 | 283 | 251 | 246 | 236 |
| (e) Others | 227 | 232 | 237 | 214 | 288 |
| Miscellaneous Group | 221 | 265 | 244 | 269 | 216 |
| **GENERAL INDEX** | 257 | 263 | 273 | 261 | 261 |

**DR. DEVENDRA SINGH**
ASSISTANT DIRECTOR

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು.

**P.R. 61**
**SC 05**

# Commercial Taxes Department

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**SUB :** KVAT Act, 2003 - Clarification under Section 59(4) regarding the rate of tax applicable on 'Hiring of Centering Materials' such as Shuttering Sheets, Base Plate, Adjustable Telescopic Props (Jacks), Adjustable Telescopic Span, H-Frame' -reg.

**REF :** Application dated: 08-09-2014 of M/s. ASA Sheet Centers Bengaluru. (TIN. 29421104805)

In the application cited above of M/s. ASA Sheet Centers, #4317, 6th Cross, Thigalarapalya Main Road, Peenya 2nd Stage, Bengaluru-560058 has sought clarification regarding the rate of tax applicable on 'Hiring of Centering Materials' such as Shuttering Sheets, Base Plate, Adjustable Telescopic Props (Jacks), Adjustable Telescopic Span, H- Frame'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence, the following clarification is issued.

### CLARIFICATION NO. CLR.CR. 89/2014-15, DATED: 23-12-2014

It is clarified 'Hiring of Centering Materials' such as Shuttering Sheets, Base Plate, Adjustable Telescopic Props (Jacks), Adjustable Telescopic Span, H-Frame' are liable to tax at 14.5% from 01.08.2012 as unscheduled goods under section 4(1) (b)(iii) of the Karnataka Value Added Tax Act, 2003.

**Ritvik Pandey**
Commissioner of Commercial Taxes,
(Karnataka), Bengaluru.

**P.R. 62**
**SC 25**

